RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ–I | ಬೆಂಗಳೂರು, ಮಂಗಳವಾರ, ಆಗಸ್ಟ್ ೨, ೨೦೧೬ (ಶ್ರಾವಣ ೧೧, ಶಕ ವರ್ಷ ೧೯೩೮) | ನಂ. ೯೮೮ |
| *Part–I* | *Bengaluru, Tuesday, August 2, 2016 (Shravana 11, Shaka Varsha 1938)* | *No. 988* |


**ಇಂಧನ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ** : ವಿದ್ಯುತ್ ಪರಿವೀಕ್ಷಣಾ ಇಲಾಖೆಯ ವಿವಿಧ ಸೇವೆಗಳನ್ನು ಇ–ಆಡಳಿತ ವ್ಯವಸ್ಥೆಯ ಅಡಿಯಲ್ಲಿ ಆನ್–ಲೈನ್‌ನಲ್ಲಿ (ಇ–ಸುರಕ್ಷಾ) ಒದಗಿಸುವ ಕುರಿತು.

**ಓದಲಾಗಿದೆ** : ಪತ್ರ ಸಂಖ್ಯೆ: ಮುವಿಪ/ವಿಪಇ/ಎಲ್‌ಇಸಿ/13673/2016–17 ದಿನಾಂಕ: 15.07.2016

**ಪ್ರಸ್ತಾವನೆ:–**

ವಿದ್ಯುತ್ ಪರಿವೀಕ್ಷಣಾ ಇಲಾಖೆಯು ವಿದ್ಯುಚ್ಛಕ್ತಿ ಕಾಯ್ದೆ 2003, ಕೇಂದ್ರೀಯ ವಿದ್ಯುತ್ ಪ್ರಾಧಿಕಾರ (ಮೆಸರ್ಸ್ ರಿಲೇಟಿಂಗ್ ಟು ಸೇಫ್ಟಿ ಮತ್ತು ಎಲೆಕ್ಟ್ರಿಕ್ ಸಪ್ಲೇ) ರೆಗ್ಯೂಲೇಷನ್ 2010 ಮತ್ತು ಕರ್ನಾಟಕ (ವಿದ್ಯುಚ್ಛಕ್ತಿ ಬಳಕೆ / ಮಾರಾಟ ಮೇಲಣ ತೆರಿಗೆ) ಕಾಯ್ದೆ 1959, ಕರ್ನಾಟಕ (ವಿದ್ಯುಚ್ಛಕ್ತಿ ಬಳಕೆ/ಮಾರಾಟ ಮೇಲಿನ ತೆರಿಗೆ ನಿಯಮ 2014, ಕರ್ನಾಟಕ ಲಿಫ್ಟ್‌ಗಳ, ಎಸ್ಕಲೇಟರುಗಳ ಮತ್ತು ಪ್ಯಾಸೆಂಜರ್ ಕನ್ವೇಯರ್ ಕಾಯ್ದೆ 2012, ಕರ್ನಾಟಕ ಲಿಫ್ಟ್‌ಗಳ, ಎಸ್ಕಲೇಟರುಗಳ ಮತ್ತು ಪ್ಯಾಸೆಂಜರ್ ಕನ್ವೇಯರ್ ನಿಯಮ 2015, ಮತ್ತು ಕರ್ನಾಟಕ (ವಿದ್ಯುತ್ ಗುತ್ತಿಗೆದಾರರ ಪರವಾನಗಿ ಮತ್ತು ವಿಷೇಶ ತಂತಿ ಕೆಲಸಗಾರರ ರಹದಾರಿ, ವಿದ್ಯುತ್ ಮೇಲ್ವಿಚಾರಕರ ಮತ್ತು ತಂತಿ ಕೆಲಸಗಾರರ ಸಕ್ಷಮ ಪ್ರಮಾಣ ಪತ್ರ ಮತ್ತು ರಹದಾರಿ ನೀಡಿಕೆ) ನಿಯಮಗಳು 2012, ಕರ್ನಾಟಕ ಸಿನಿಮಾ (ನಿಯಂತ್ರಣ) ಕಾಯ್ದೆ 1964, ಕರ್ನಾಟಕ ಸಿನಿಮಾ (ನಿಯಂತ್ರಣ) ನಿಯಮಗಳು 2014 ಮತ್ತು ವಿದ್ಯುತ್ ಸಂಬಂಧಿತ ನಿಯಮ/ನಿಯಮಾವಳಿಗಳ ಅಡಿಯಲ್ಲಿ ನೀಡಲಾಗುವ ಸೇವೆಗಳು ಈ ಕೆಳಕಂಡಂತೆ ಇರುತ್ತದೆ.

1) ಹೆಚ್.ಟಿ ಮತ್ತು ಇ.ಹೆಚ್.ಟಿ ವಿದ್ಯುತ್ ಸ್ಥಾಪವರಗಳು/ವಿದ್ಯುತ್ ಜನಕಗಳು/ಖಾಸಗಿ ವಿದ್ಯುತ್ ಉತ್ಪಾದನಾ ಘಟಕಗಳು / ಎಸ್.ಇ.ಡ.ಬ್ಲೂ ಲೇಔಟ್‌ಗಳು/ಎಮ್.ವಿ ಮತ್ತು ಎಲ್.ವಿ ವಿದ್ಯುತ್ ಸ್ಥಾವರಗಳು/ವಿದ್ಯುತ್ ಸ್ವೀಕರಣಾ ಅಥವಾ ಸರಬರಾಜು ಅಥವಾ ಮರು ಸರಬರಾಜು ಸ್ಥಾವರಗಳ ಕೇಂದ್ರಗಳು /ಕವಿನಿನಿ/ಕವಿಪ್ರನಿನಿ/ಎಸ್ಕಾಂಗಳು/ಹುಕ್ಕೇರಿ ವಿದ್ಯುತ್ ಗ್ರಾಹಕರ ಸಂಘ/ ಗ್ರಾಹಕರ ವಿದ್ಯುತ್ ಸ್ಥಾವರಗಳ ನೀಲಿ ನಕ್ಷೆಗಳ ಅನುಮೋದನೆಗಳು.

2) ಹೆಚ್.ಟಿ ಮತ್ತು ಇ.ಹೆಚ್.ಟಿ ವಿದ್ಯುತ್ ಸ್ಥಾವರಗಳು / ವಿದ್ಯುತ್ ಜನಕಗಳು/ ಖಾಸಗಿ ವಿದ್ಯುತ್ ಉತ್ಪಾದನಾ ಘಟಕಗಳು/ಎಸ್.ಇ.ಡಬ್ಲೂ.ಲೇ ಔಟ್‌ಗಳು / ಎಮ್.ವಿ ಮತ್ತು ಎಲ್.ವಿ ವಿದ್ಯುತ್ ಸ್ಥಾವರಗಳು/ವಿದ್ಯುತ್ ಸ್ವೀಕರಣಾ ಅಥವಾ ಮರು ಸರಭರಾಜು ಸ್ಥಾವರಗಳ ಕೇಂದ್ರಗಳು / ಕವಿನಿನಿ/ಕವಿಪ್ರನಿನಿ/ಎಸ್ಕಾಂಗಳು/ಹುಕ್ಕೇರಿ ವಿದ್ಯುತ್ ಗ್ರಾಹಕ ಸಂಘ / ಗ್ರಾಹಕರ ವಿದ್ಯುತ್ ಸ್ಥಾವರಗಳ ಸ್ಥಾಪನಾ ಪರಿವೀಕ್ಷಣೆ ಮತ್ತು ವಿದ್ಯುತ್ ಸುರಕ್ಷತಾ ಪತ್ರಗಳ ಮಂಜೂರಾತಿಗಳು.

3) ಲಿಫ್ಟ್ / ಪ್ಯಾಸೆಂಜರ್ ಕನ್ವೆಯರ್ / ಎಸ್ಕಲೇಟರ್ ಸ್ಥಾವರಗಳ ಸ್ಥಾಪನಾ ನೀಲಿ ನಕ್ಷೆ ಅನುಮೋದನೆಗಳು.
4) ಲಿಫ್ಟ್/ ಪ್ಯಾಸೆಂಜರ್ ಕನ್ವೆಯರ್ / ಎಸ್ಕಲೇಟರ್ ಸ್ಥಾವರಗಳ ಪರಿವೀಕ್ಷಣೆ ಮತ್ತು ಚಾಲನಾ ಪರವಾನಗಿ ಮಂಜುರಾತಿಗಳು ಮತ್ತು ನವೀಕರಣ.
5) ಲಿಫ್ಟ್ / ಪ್ಯಾಸೆಂಜರ್ ಕನ್ವೆಯರ್ / ಎಸ್ಕಲೇಟರ್ ಹಾಲಿ ಇರುವ ಸ್ಥಾವರಗಳಲ್ಲಿ ಸೇರ್ಪಡೆ ಅಥವಾ ಮಾರ್ಪಾಡುಗಳಿಗೆ ಅನುಮೋದನೆ.
6) ಲಿಫ್ಟ್ / ಪ್ಯಾಸೆಂಜರ್ ಕನ್ವೆಯರ್ / ಎಸ್ಕಲೇಟರ್‌ಗಳ ತಯಾರಕರ ನೋಂದಣಿ ಮಂಜೂರಾತಿ ಮತ್ತು ನವೀಕರಣ ಪ್ರಕ್ರಿಯೆಗಳು.
7) ಹೆಚ್.ಟಿ ಮತ್ತು ಇ.ಹೆಚ್.ಟಿ ವಿದ್ಯುತ್ ಸ್ಥಾವರಗಳು / ವಿದ್ಯುತ್ ಜನಕಗಳು / ಖಾಸಗಿ ವಿದ್ಯುತ್ ಉತ್ಪಾದನಾ ಘಟಕಗಳು /ಎಸ್.ಇ.ಡಬ್ಲ್ಯೂ ಲೇ ಔಟ್‌ಗಳು / ಎಮ್.ವಿ ಮತ್ತು ಎಲ್.ವಿ ವಿದ್ಯುತ್ ಸ್ಥಾವರಗಳು/ವಿದ್ಯುತ್ ಸ್ವೀಕರಣಾ ಅಥವಾ ಸರಬರಾಜು ಅಥವಾ ಮರು ಸರಬರಾಜು ಸ್ಥಾವರಗಳ ಕೇಂದ್ರಗಳು/ಕವಿನಿನಿ/ಕವಿಪ್ರನಿನಿ/ಎಸ್ಕಾಂಗಳು/ಹುಕ್ಕೇರಿ ವಿದ್ಯುತ್ ಗ್ರಾಹಕರ ಸಂಘ/ ಗ್ರಾಹಕರ ವಿದ್ಯುತ್ ಸ್ಥಾವರಗಳ ನಿಯತಕಾಲಿಕ ಪರಿವೀಕ್ಷಣೆಗಳು.
8) ವಿದ್ಯುತ್ ಸಂಬಂಧಿತ ಅಪಘಾತಗಳ ತನಿಖಾ ವರದಿ ಸಲ್ಲಿಕೆಯ ಪ್ರಕ್ರಿಯೆಗಳು.
9) ವಿದ್ಯುಚ್ಛಕ್ತಿ ಬಳಕೆ ಮತ್ತು ಮಾರಾಟದ ಮೇಲಿನ ತೆರಿಗೆ ವಸೂಲಾತಿಗಳು.
10) ವಿದ್ಯುತ್ ಗುತ್ತಿಗೆದಾರರ ಪರವಾನಗಿಯ ಮಂಜೂರಾತಿಗಳು.
11) ವಿದ್ಯುತ್ ಮೇಲ್ವಿಚಾರಕರ ಸಕ್ಷಮ ಪ್ರಮಾಣ ಪತ್ರ ಮತ್ತು ರಹದಾರಿಗಳ ಮಂಜೂರಾತಿಗಳು.
12) ತಂತೀ ಕೆಲಸಗಾರರ ರಹದಾರಿಯ ಮಂಜೂರಾತಿಗಳು.
13) ವಿದ್ಯುತ್ ಗುತ್ತಿಗೆದಾರರ ಪರವಾನಗಿಯ ನವೀಕರಣಗಳು.
14) ವಿದ್ಯುತ್ ಮೇಲ್ವಿಚಾರಕರ ಮತ್ತು ತಂತೀ ಕೆಲಸಗಾರರ ರಹದಾರಿಗಳ ನವೀಕರಣಗಳು.
15) ಸಿನಿಮಾ ಚಾಲಕರ ಸಕ್ಷಮ ಪ್ರಮಾಣ ಪತ್ರ ಮತ್ತು ರಹದಾರಿಗಳ ಮಂಜೂರಾತಿಗಳು.
16) ವಿದ್ಯುತ್ ಗುತ್ತಿಗೆದಾರರ ಪರವಾನಗಿ, ವಿದ್ಯುತ್ ಮೇಲ್ವಿಚಾರಕರ ಮತ್ತು ತಂತೀ ಕೆಲಸಗಾರರ ರಹದಾರಿಗಳ ನಕಲು ಪ್ರತಿಗಳನ್ನು ನೀಡುವುದು.
17) ವಿಶೇಷ ತಂತೀ ಕೆಲಸಗಾರರ ರಹದಾರಿಯ ಮಂಜೂರಾತಿ ಮತ್ತು ನವೀಕರಣಗಳು.
18) ವಿದ್ಯುತ್ ಮೇಲ್ವಿಚಾರಕರ (ಸಾಮಾನ್ಯ ಮತ್ತು ಗಣಿ) ಮತ್ತು ತಂತೀ ಕೆಲಸಗಾರರ ಗ್ರೇಡ್–2 ರಹದಾರಿಗಳ ನೀಡುವ ಪರೀಕ್ಷೆಗಳನ್ನು ನಡೆಸುವುದು.
19) ವಿದ್ಯುತ್ ಗುತ್ತಿಗೆದಾರರ ಪರವಾನಗಿ ವಿದ್ಯುತ್ ಮೇಲ್ವಿಚಾರಕರ ಮತ್ತು ತಂತೀ ಕೆಲಸಗಾರರ ರಹದಾರಿಗಳ ಅಮಾನತ್ತು ಪ್ರಕ್ರಿಯೆಗಳು.
20) ಖಾಯಂ/ಅರೆ ಖಾಯಂ/ಸಂಚಾರಿ/ಮಲ್ಟಿಪ್ಲೆಕ್ಸ್/ವಿಡಿಯೋ ಚಿತ್ರ ಮಂದಿಗಳ ವಿದ್ಯುತ್ ಸುರಕ್ಷತಾ ಪತ್ರಗಳನ್ನು ಮಂಜೂರಾತಿ / ನವೀಕರಣ ನೀಡುವುದು.
21) ವಿದ್ಯುತ್ ಉಪಕರಣಗಳ ಪರೀಕ್ಷೆಗಳು / ವಿದ್ಯುತ್ ಪರಿವರ್ತಕಗಳಲ್ಲಿನ ಎಣ್ಣೆ (ಆಯಿಲ್) ಸೋಸುವುದು ಮತ್ತು ಪರೀಕ್ಷಿಸುವುದು.
22) ವಿದ್ಯುತ್ ಮಾಪಕಗಳ ಬಗ್ಗೆ ಇರುವ ವ್ಯಾಜ್ಯಗಳ ಕುರಿತು ಪರೀಕ್ಷೆಗಳಿಗೆ ಸಾಕ್ಷಿಯಾಗಿ ಭಾಗವಹಿಸುವುದು.
23) ಖಾಯಂ/ಅರೆ ಖಾಯಂ/ಸಂಚಾರಿ/ಮಲ್ಟಿಪ್ಲೆಕ್ಸ್ ಚಿತ್ರ ಮಂದಿರಗಳ ವಿದ್ಯುತ್ ಸ್ಥಾವರದ ನೀಲಿ ನಕ್ಷೆ ಅನುಮೋದನೆಗಳು.
24) ದೂರುಗಳ ಬಗ್ಗೆ ಪರಿಶೀಲನೆ ಮತ್ತು ಪರಿಹರಿಸುವುದು.

ಈ ಮೇಲೆ ಸೂಚಿಸಿರುವ ಸೇವೆಗಳನ್ನು ಇ–ಆಡಳಿತ (ಇ.ಡಿ.ಸಿ.ಎಸ್) ಇಲಾಖೆಯ ಸಹಕಾರದೊಂದಿಗೆ ಆನ್‌ಲೈನ್ (ಇ–ಸುರಕ್ಷಾ) ವ್ಯವಸ್ಥೆಯ ಅಡಿಯಲ್ಲಿ ಅರ್ಜಿಗಳನ್ನು ಸ್ವೀಕರಿಸಿ ವಿಲೇ ಮಾಡುವ ಬಗ್ಗೆ ಹಾಲಿ ಪ್ರಚಲಿತವಿರುವ ವ್ಯವಸ್ಥೆಯನ್ನು ಮ್ಯಾಪಿಂಗ್ ಮಾಡಲಾಗಿರುತ್ತದೆ. ಸಾರ್ವಜನಿಕರಿಗೆ ಸರಳ, ಪಾರದರ್ಶಕವಾದ ಮತ್ತು ಉತ್ತರದಯಿತ್ವದ ಸೇವೆಯನ್ನು ನೀಡುವ

ನಿಟ್ಟಿನಲ್ಲಿ ಹೊಸ ವಿಧಾನವನ್ನು ಸಿದ್ದಪಡಿಸಲಾಗಿರುತ್ತದೆ. ಹಾಗೂ ಆನ್‌ಲೈನ್ (ಇ–ಸುರಕ್ಷಾ) ವ್ಯವಸ್ಥೆಯ ಅಡಿಯಲ್ಲಿ ಅರ್ಜಿಗಳನ್ನು ಸ್ವೀಕರಿಸಿ ವಿಲೇ ಮಾಡುವ ಸೇವೆಯನ್ನು ನೀಡಲು ಅಗತ್ಯವಿರುವ ತಂತ್ರಾಂಶವನ್ನು ಎನ್.ಐ.ಸಿ ಇಲಾಖೆಯು ಅಭಿವೃದ್ಧಿ ಪಡಿಸಿದ್ದು ಹಾಗೂ ಇ–ಆಡಳಿತ ಇಲಾಖೆಯವರು ವಿದ್ಯುತ್ ಪರಿವೀಕ್ಷಣಾ ಇಲಾಖೆಯಿಂದ ನೀಡಲಾಗುವ ಸೇವೆಗಳ ಬಗ್ಗೆ ವಿವರವಾದ ವರದಿಯನ್ನು ತಯಾರಿಸಿ ಅವುಗಳಿಗೆ ಸಂಬಂಧಿತ ತಂತ್ರಾಂಶವನ್ನು ಸಹ ಅಭಿವೃದ್ಧಿ ಪಡಿಸಿರುವುದರಿಂದ ಮೇಲಿನ ಎಲ್ಲಾ ಸೇವೆಗಳನ್ನು ಹಂತ ಹಂತವಾಗಿ ಆನ್‌ಲೈನ್ ವ್ಯವಸ್ಥೆಯ (ಇ–ಸುರಕ್ಷಾ) ಅಡಿಯಲ್ಲಿ ಜಾರಿಗೊಳಿಸುವ ಕುರಿತು ಮೇಲೆ ಓದಲಾದ ಮುಖ್ಯ ವಿದ್ಯುತ್ ಪರಿವೀಕ್ಷಕರ ಪತ್ರದಲ್ಲಿ ಸರ್ಕಾರದ ಅನುಮೋದನೆಯನ್ನು ಕೋರಲಾಗಿದೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 175 ಇಬಿಎಸ್ 2016 ಬೆಂಗಳೂರು, ದಿನಾಂಕ: 01.08.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ವಿದ್ಯುತ್ ಪರಿವೀಕ್ಷಣಾ ಇಲಾಖೆಯಿಂದ ವಿವಿಧ ಕಾಯ್ದೆ / ನಿಯಮಗಳಡಿ ನೀಡಲಾಗುವ ಎಲ್ಲಾ ಸೇವೆಗಳನ್ನು ಸಕಾಲದಲ್ಲಿ ಮತ್ತು ಪಾರದರ್ಶಕವಾಗಿ ನೀಡಲು ಅನುವಾಗುವಂತೆ, ಅವುಗಳನ್ನು ಹಂತ ಹಂತವಾಗಿ ಆನ್‌ಲೈನ್ (ಇ–ಸುರಕ್ಷಾ) ವ್ಯವಸ್ಥೆಯಡಿಯಲ್ಲಿ ಜಾರಿಗೊಳಿಸಲು ಸರ್ಕಾರದ ಅನುಮೋದನೆ ನೀಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎನ್. ಶಿವಕುಮಾರ್**
ಪೀಠಾಧಿಕಾರಿ,
ಇಂಧನ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು ೨೦೦

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–I | ಬೆಂಗಳೂರು, ಶನಿವಾರ, ಆಗಸ್ಟ್ ೬, ೨೦೧೬ (ಶ್ರಾವಣ ೧೫, ಶಕ ವರ್ಷ ೧೯೩೮) | ನಂ. ೯೯೬ |
|---|---|---|
| *Part–I* | *Bengaluru, Saturday, August 6, 2016 (Shravana 15, Shaka Varsha 1938)* | *No. 996* |


**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಉತ್ತರ ಕನ್ನಡ ಜಿಲ್ಲೆಯ ಸೊಪ್ಪಿನಬೆಟ್ಟ ಸೌಲಭ್ಯಗಳನ್ನು ಹೆಚ್ಚಿಸುವ ಸಂಬಂಧ ಕರ್ನಾಟಕ ಅರಣ್ಯ ಕೈಪಿಡಿಗೆ ತಿದ್ದುಪಡಿ ತರುವ ಬಗ್ಗೆ

**ಓದಲಾಗಿದೆ:** (1) ದಿನಾಂಕ:22.07.2015ರಂದು ಮಾನ್ಯ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

(2) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾದಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ಇವರ ಪತ್ರ ಸಂಖ್ಯೆ:ಬಿ5/ಎಸ್.ಬಿ.ಆರ್/ಸಿಆರ್– 140/2012–13/207 ದಿನಾಂಕ:28.05.2016.

(3) ದಿನಾಂಕ:19.07.2016ರಂದು ಅಪರ ಮುಖ್ಯ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ದಿನಾಂಕ:22.07.2015ರಂದು ಮಾನ್ಯ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವರ ಅಧ್ಯಕ್ಷತೆಯಲ್ಲಿ ಬೆಟ್ಟ ಅರಣ್ಯ ಪ್ರದೇಶದ ಅಭಿವೃದ್ಧಿಗೆ ಸಂಬಂಧಿಸಿದಂತೆ ನಡೆದ ಸಭೆಯಲ್ಲಿ ಈ ಕೆಳಕಂಡ ನಿರ್ಣಯಗಳನ್ನು ತೆಗೆದುಕೊಳ್ಳಲಾಗಿತ್ತು.

1) ಕರ್ನಾಟಕ ಅರಣ್ಯ ಕೈಪಿಡಿ 131 ಎಫ್ ನಲ್ಲಿ ನಮೂದಿಸಿರುವ ಸವಲತ್ತಿನಡಿ ಬೆಟ್ಟದಾರರಿಗೆ ನೀಡಲಾಗುವ ಈಗಿನ ಲಾಭಾಂಶವನ್ನು ಹೆಚ್ಚಿಸಿ ಬೆಟ್ಟದಾರರಿಗೆ ಶೇ 75% ಹಾಗೂ ಸರ್ಕಾರಕ್ಕೆ ಶೇ 25% ರಂತೆ ನೀಡುವ ಬಗ್ಗೆ ಕಾನೂನು ಇಲಾಖೆಯ ಅಭಿಮತ ಪಡೆದು ಈ ಬಗ್ಗೆ ಆದೇಶ ಹೊರಡಿಸುವುದು.

2) ಮೇಲೆ ತಿಳಿಸಿರುವ ಹಂಚಿಕೆ ಬಗ್ಗೆ ಕಾನೂನು ಇಲಾಖೆಯಿಂದ ಸಮ್ಮತಿ ದೊರಕದಿದ್ದರೆ, ಈ ಕೆಳಕಂಡಂತೆ ಪರಿಷ್ಕರಿಸಲು ಒಮ್ಮತದಿಂದ ತೀರ್ಮಾನಿಸಲಾಯಿತು.

   1. ಬೆಟ್ಟದಾರರಿಗೆ – ಶೇ 50%
   2. ಬೆಟ್ಟದಾರರ ಸಮೂಹ (ಬೆಟ್ಟದಾರರ ಗ್ರಾ.ಅ.ಸ)–25%
   3. ಸರ್ಕಾರಕ್ಕೆ–25%

2. ಈ ಸಭೆಯ ನಿರ್ಣಯದಂತೆ, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ಇವರು ಕರ್ನಾಟಕ ಅರಣ್ಯ ಕೈಪಿಡಿ 1976ರ ಕಂಡಿಕೆ 131 ಎಫ್ 7 (xi) ಗೆ ತಿದ್ದುಪಡಿ ತರಲು ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಸದರಿ ತಿದ್ದುಪಡಿಯ ಕರಡನ್ನು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆಯೊಂದಿಗೆ ಸಮಾಲೋಚಿಸಿ ಪರಿಶೀಲಿಸಲಾಗಿದೆ. ಸದರಿ ಇಲಾಖೆಯು ಕರ್ನಾಟಕ ಅರಣ್ಯ ಕೈಪಿಡಿಗೆ ಪ್ರಸ್ತಾಪಿಸಿರುವ ತಿದ್ದುಪಡಿಯು Forest Act & Rules ಅಥವಾ Forest Conservation Act and rules ಗೆ ವ್ಯತಿರಿಕ್ತವಾಗದಂತೆ ಎಚ್ಚರವಹಿಸಿ, ಮುಂದಿನ ಕ್ರಮ ಕೈಗೊಳ್ಳುವಂತೆ ತಿಳಿಸಿತ್ತು.

3. ಈ ಹಿನ್ನೆಲೆಯಲ್ಲಿ, ದಿನಾಂಕ:19.07.2016ರಂದು ಜರುಗಿದ ಸಭೆಯಲ್ಲಿ ಪ್ರಸ್ತಾಪಿತ ತಿದ್ದುಪಡಿಯ ಕರಡನ್ನು ಮತ್ತೊಮ್ಮೆ ವಿವರವಾಗಿ ಚರ್ಚಿಸಲಾಗಿದೆ. ವಿವರವಾದ ಚರ್ಚೆಯ ನಂತರ ಕರ್ನಾಟಕ ಅರಣ್ಯ ಕೈಪಿಡಿಯಲ್ಲಿರುವ ಉಪಬಂಧಗಳನ್ನು ಅನುಷ್ಠಾನಗೊಳಿಸಲು ಸುಲಭವಾಗುವ ರೀತಿಯಲ್ಲಿ ತಿದ್ದುಪಡಿ ಮಾಡಿ ಇದರಿಂದ ಬೆಟ್ಟದಾರರಿಗೆ ಹೆಚ್ಚಿನ ಸೌಲಭ್ಯಗಳನ್ನು ವಿಸ್ತರಿಸಲು ಹಾಗೂ ಸೊಪ್ಪಿನಬೆಟ್ಟ ನಿರ್ವಹಣೆಯನ್ನು ಸರಳೀಕರಿಸಲು ಅನುವಾಗುವಂತೆ ಕರ್ನಾಟಕ ಅರಣ್ಯ ಕೈಪಿಡಿ ಪ್ಯಾರಾ 131 F 7(xi) Maintenance of Betta Land (e) ಗೆ ಸೂಕ್ತವಾಗಿ ತಿದ್ದುಪಡಿ ತರಲು ನಿರ್ಣಯಿಸಲಾಯಿತು. ಈ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 225 ಎಫ್‌ಎಎಫ್ 2012. ಬೆಂಗಳೂರು, ದಿನಾಂಕ: 06.08.2016.**

4. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಉತ್ತರ ಕನ್ನಡ ಜಿಲ್ಲೆ ಸೊಪ್ಪಿನಬೆಟ್ಟದಾರರಿಗೆ ಸೌಲಭ್ಯವನ್ನು ಹೆಚ್ಚಿಸುವ ಸಂಬಂಧದಲ್ಲಿ ಕರ್ನಾಟಕ ಅರಣ್ಯ ಕೈಪಿಡಿ 1976ರ ಪ್ಯಾರಾ 131 F 7(xi) ಗೆ ಈ ಕೆಳಕಂಡ ತಿದ್ದುಪಡಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅನುಷ್ಠಾನಗೊಳಿಸಲಾಗಿದೆ.

| PARA | EXISTING PROVISION | AMENDMENT EFFECTED |
|---|---|---|
| **CHAPTER X**<br><br>Para 131 F 7 (xi) Maintenance of Betta lands (e) | **CHAPTER X**<br><br>If, after 5 years, the above minimum number of trees are not grown by the gardener, he would be liable to pay a penalty of Rs.25 per ha. Failure on the part of the gardener to make up the deficiency will entitle the Forest Department to plant up the required number of trees in his area and the cost of planting being limited to Rs. 125.00 per ha. shall be borne by the gardener. The gardener shall be entitled to one-third of the trees planted, including reserved trees for his own use, free of cost or 30 percent of the value of timber if the Government decides to take it. | **CHAPTER X**<br><br>If, after 5 years, the above minimum number of trees are not grown by the gardener, he would be liable to pay one time penalty of Rs.5000/- per ha. Failure on the part of the gardener to make up the deficiency will entitle the Forest Department to plant up the required number of trees in his area.<br><br>When the Gardener takes up planting & protection work in the Betta land allotted to him, as per the sanctioned working plan of that division, then upon the final harvest of trees which will also be as per provisions of sanctioned Management Plan / Working Plan, he will be entitled to 75% of the produce or value thereof, and the remaining 25% of the produce or value thereof will be the share of Government.<br><br>Bettadar is entitled free of cost for rab and twigs as a source of green manure from Soppinabetta lands.<br><br>NTFP can also be collected by Bettadars for bonafide own use from Soppina Bettas. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಎಸ್.ಭಾಗ್ಯಲಕ್ಷ್ಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 100

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ



| ಭಾಗ–I | ಬೆಂಗಳೂರು, ಬುಧವಾರ, ಆಗಸ್ಟ್ ೧೭, ೨೦೧೬ (ಶ್ರಾವಣ ೨೬, ಶಕ ವರ್ಷ ೧೯೩೮) | ನಂ. ೧೦೨೧ |
|---|---|---|
| *Part–I* | *Bengaluru, Wednesday, August 17, 2016 (Shravana 26, Shaka Varsha 1938)* | *No. 1021* |



**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖಾ ವತಿಯಿಂದ ನಡೆಸುತ್ತಿರುವ ಕಡವುಗಳ ಹಾಸಲು ದರಗಳನ್ನು ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಲೋಇ 6 ಪಿಜಿಎಲ್ 99, ದಿನಾಂಕ: 04.07.2001

2) ಸರ್ಕಾರದ ಆದೇಶ ಸಂಖ್ಯೆ: ಲೋಇ 6 ಪಿಜಿಎಲ್ 99, ದಿನಾಂಕ: 02.05.2003

3) ಸರ್ಕಾರದ ಆದೇಶ ಸಂಖ್ಯೆ: ಲೋಇ 12 ಪಿಜಿಎಲ್ 2003, ದಿನಾಂಕ: 09.7.2003

4) ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಕಾರವಾರ, ರವರ ಪತ್ರ ಸಂಖ್ಯೆ: ಬಂಒಜಸಾ/30/ಜಿಎನ್‌ಎಲ್–II/2013–2014, ದಿನಾಂಕ: 05.06.2014, 16.10.2014, 14.01.2015 ಮತ್ತು 09.10.2015

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯು ನಡೆಸುತ್ತಿರುವ ಎಲ್ಲಾ ಕಡವು ಸೇವೆಗಳ ದರಗಳನ್ನು ಪರಿಷ್ಕರಿಸಿ ಆದೇಶಿಸಲಾಗಿದೆ. ತದನಂತರ ಮೇಲೆ ಓದಲಾದ (2)ರ ಆದೇಶದಲ್ಲಿ ಸದರಿ ದರಗಳನ್ನು ಪರಿಷ್ಕರಿಸಿ ಆದೇಶ ಹೊರಡಿಸಲಾಗಿದೆ. ಸಾರ್ವಜನಿಕರು/ಪ್ರಜಾ ಪ್ರತಿನಿಧಿಗಳಿಂದ ಈ ಪರಿಷ್ಕೃತ ದರಗಳ ಸಂಬಂಧ ಪ್ರತಿಭಟನೆಗಳು ವ್ಯಕ್ತವಾದ ಹಿನ್ನೆಲೆಯಲ್ಲಿ ಮೇಲೆ ಓದಲಾದ (3)ರ ಆದೇಶದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಲೋಇ 6 ಪಿಜಿಎಲ್ 99, ದಿನಾಂಕ: 02.05.2003ನ್ನು ತಾತ್ಕಾಲಿಕವಾಗಿ ತಡೆಹಿಡಿಯಲಾಗಿರುತ್ತದೆ.

ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಕಾರವಾರ, ರವರು ಮೇಲೆ ಓದಲಾದ (4)ರ ಪತ್ರದಲ್ಲಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವತಿಯಿಂದ ರಾಜ್ಯದ ವಿವಿಧ ಭಾಗಗಳಲ್ಲಿ ಮುಳುಗಡೆ ಪ್ರದೇಶವನ್ನೊಳಗೊಂಡಂತೆ ಅತ್ಯಂತ ಹಿಂದುಳಿದ ಪ್ರದೇಶಗಳಲ್ಲಿ ಕಡವು ಸೇವೆಗಳನ್ನು ನಿರ್ವಹಿಸುತ್ತಿದ್ದು, ಸದರಿ ಪ್ರದೇಶದ ಜನರಿಗೆ ಕಡವು ಸೇವೆಯು ಹತ್ತಿರದ ಮತ್ತು ಏಕೈಕ ಸಂಪರ್ಕ ಸಾಧನವಾಗಿರುತ್ತದೆ. ಒಳನಾಡು ಜಲಸಾರಿಗೆ ಇಲಾಖೆಯಿಂದ ನಡೆಸುತ್ತಿರುವ ಕಡವುಗಳ ಹಾಸಲು ದರಗಳನ್ನು 2001ರಲ್ಲಿ ಪರಿಷ್ಕರಿಸಿದ್ದು, ತದನಂತರ 10 ವರ್ಷಗಳಿಗೂ ಮೇಲ್ಪಟ್ಟಿದ್ದರೂ

ಸದರಿ ದರಗಳ ಪರಿಷ್ಕರಣೆಯಾಗಿರುವುದಿಲ್ಲ. ಪ್ರತಿ ವರ್ಷ ಇಂಧನ ತೈಲಗಳ ದರ ಹಾಗೂ ಇಂಜಿನ್ನಿನ ಬಿಡಿ ಭಾಗಗಳ ದುರಸ್ತಿ ವೆಚ್ಚ ಹೆಚ್ಚಾಗುತ್ತಿರುವುದರಿಂದ, ಅವುಗಳ ನಿರ್ವಹಣಾ ವೆಚ್ಚವನ್ನು ಸರಿದೂಗಿಸುವುದು ಕಷ್ಟವಾಗಿದ್ದು, ಕಡವಿನ ಆದಾಯ ಮತ್ತು ವೆಚ್ಚ ಗಮನಿಸಿದಲ್ಲಿ ಆದಾಯವು ಗಣನೀಯವಾಗಿ ಕಡಿಮೆ ಇರುತ್ತದೆ. ಕಡವು ಸೇವೆಯಲ್ಲಿನ ನಿರ್ವಹಣಾ ವೆಚ್ಚವು ಮಾರುಕಟ್ಟೆ ದರಗಳನ್ನು ಆಧರಿಸಿರುವುದರಿಂದ ಹಾಸಲು ದರವನ್ನು ಪರಿಷ್ಕರಿಸುವ ಅಗತ್ಯವಿರುತ್ತದೆ ಎಂದು ತಿಳಿಸುತ್ತಾ, ಪ್ರಸ್ತುತ ಇಲಾಖಾ ವತಿಯಿಂದ ನಡೆಸುತ್ತಿರುವ 19 ಕಡವುಗಳಲ್ಲಿ ಆಕರಿಸಬಹುದಾದ ಹಾಸಲು ದರಗಳ ತ:ಖ್ತೆಯನ್ನು ಒದಗಿಸುತ್ತಾ, ಅದರಂತೆ ದರಗಳನ್ನು ಪರಿಷ್ಕರಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 86 ಬನೌಸೇ 2014, ಬೆಂಗಳೂರು, ದಿನಾಂಕ: 12.08.2016**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ವತಿಯಿಂದ ನಡೆಸಲಾಗುತ್ತಿರುವ 19 ಕಡವು ಸೇವೆಗಳ ಹಾಸಲು ದರಗಳನ್ನು ಈ ಆದೇಶದೊಂದಿಗೆ ಲಗತ್ತಿಸಲಾದ ಅನುಬಂಧದಲ್ಲಿ ನಮೂದಿಸಿರುವಂತೆ ಪರಿಷ್ಕರಿಸಿ, ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಜಾರಿಗೊಳಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ:

(1) ಪ್ರತಿಯೊಂದು ಬೋಟ್‌ಯಾರ್ಡ್/ಡಾಕ್‌ಯಾರ್ಡ್‌ಗಳಲ್ಲಿ ಟಿಕೆಟ್ ಬೂತ್‌ಗಳನ್ನು ಸ್ಥಾಪಿಸುವ ಮೂಲಕ ಹಾಸಲು ಸಂಗ್ರಹಣೆಯಲ್ಲಿ ಯಾವುದೇ ರೀತಿಯ ಸೋರಿಕೆಯನ್ನು ತಡೆಗಟ್ಟಲು ದೃಢವಾದ ಹಾಸಲು ಸಂಗ್ರಹಣಾ ವ್ಯವಸ್ಥೆಯನ್ನು ಕಲ್ಪಿಸಲು ಕ್ರಮ ವಹಿಸುವುದು;

(2) ಇನ್ನು ಮುಂದೆ ಪ್ರತಿ ಆರ್ಥಿಕ ವರ್ಷ ಪ್ರಾರಂಭವಾಗುವ ಮೂರು ತಿಂಗಳ ಮೊದಲು ಪರಿಷ್ಕರಿಸಬೇಕಾಗಿರುವ ಹಾಸಲು ದರಗಳ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿ, ಒಪ್ಪಿಗೆಯನ್ನು ಪಡೆಯುವುದು.

ಈ ಆದೇಶವನ್ನು ಆರ್ಥಿಕ ಇಲಾಖೆ (ಲೋಕೋಪಯೋಗಿ ಆರ್ಥಿಕ ಕೋಶ), ರವರ ಟಿಪ್ಪಣಿ ಸಂಖ್ಯೆ:ಆಇ 117 ಆಕೋ–2/2016, ದಿನಾಂಕ: 25.05.2016 ಮತ್ತು ಆಇ 187 ಆಕೋ–2/2016, ದಿನಾಂಕ: 16.07.2016 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ. ಗಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ(ಬಂದರುಗಳು)

## ಸರ್ಕಾರದ ಆದೇಶ ಸಂಖ್ಯೆ: ಲೋಇ 86 ಬನೌಸೇ 2014, ದಿನಾಂಕ: 12.08.2016ಕ್ಕೆ ಅನುಬಂಧ

## ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖಾ ವತಿಯಿಂದ ನಡೆಸುತ್ತಿರುವ ಕಡವು ಸೇವೆಗಳಲ್ಲಿ ಪ್ರಸ್ತುತ ಆಕರಿಸುತ್ತಿರುವ ಹಾಗೂ ಪರಿಷ್ಕರಿಸಿರುವ ಹಾಸಲು ದರಗಳ ತ:ಖ್ತೆ

| ಕ್ರ ಸಂ: | ವಲಯದ ಹೆಸರು | ಪ್ರಸ್ತುತ ಇರುವ ದರ | | | | | | | | | | | | | | | | ಪರಿಷ್ಕರಿಸಿರುವ ದರಗಳು | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಪ್ರಯಾಣಿಕರು | ಆಡು | ದನ | ಸೈಕಲ್ | ಮೋಟರ್ ಸೈಕಲ್ | ಬಸ್ಸು | ಕಾರು | ವ್ಯಾನ್ | ಜೀಪ್ | ಲಾರಿ | ಟಿಲ್ಲರ್ | ಟ್ರ್ಯಾಕ್ಟರ್ | ಎತ್ತಿನ ಗಾಡಿ | ಆಟೋ ರಿಕ್ಷಾ | ಸರಕು ಪ್ರತಿ 50 Kg. | ವಿಶೇಷ ಟ್ರಿಪ್ ಒಂದಕ್ಕೆ | ಪ್ರಯಾಣಿಕರು | ಆಡು | ದನ | ಸೈಕಲ್ | ಮೋಟರ್ ಸೈಕಲ್ | ಬಸ್ಸು | ಕಾರು | ವ್ಯಾನ್ | ಜೀಪ್ | ಲಾರಿ | ಟಿಲ್ಲರ್ | ಟ್ರ್ಯಾಕ್ಟರ್ | ಎತ್ತಿನ ಗಾಡಿ | ಆಟೋರಿಕ್ಷಾ | ಸರಕು ಪ್ರತಿ 50 Kg. | ವಿಶೇಷ ಟ್ರಿಪ್ ಒಂದಕ್ಕೆ |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 | 23 | 24 | 25 | 26 | 27 | 28 | 29 | 30 | 31 | 32 | 33 | 34 |
| | <u>ಬೆಂಗಳೂರು ವಲಯ</u> | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. | ರೂ. |
| 1) | ದಾಸನಪುರ ಕಾವೇರಿಪುರ 1 ಕಿ.ಮೀ. | 2 | 2 | 5 | 1 | 5 | -- | -- | -- | -- | -- | -- | -- | -- | -- | 2 | -- | 5 | 5 | 10 | 5 | 10 | -- | -- | -- | -- | -- | -- | -- | -- | -- | 5 | -- |
| 2) | ಭಿಮನ ಕೊಲ್ಲಿ ಎನ್ ಬೆಳ್ಳೂರು 2.5 ಕಿ.ಮೀ | 10 | -- | -- | -- | -- | -- | -- | -- | -- | -- | -- | -- | -- | -- | -- | -- | 20 | -- | -- | -- | -- | -- | -- | -- | -- | -- | -- | -- | -- | -- | 5 | 200 |
| | <u>ಹುಬ್ಬಳ್ಳಿ ವಲಯ</u> | | | | | | | | | | | | | | | | | | | | | | | | | | | | | | | | |
| 3) | ಹೆಸರೂರು ಸೊವಿನಹಳ್ಳಿ 1.5 ಕಿ.ಮೀ. | 2 | 2 | 5 | 1 | 5 | -- | -- | -- | -- | -- | -- | -- | -- | -- | 2 | -- | 5 | 5 | 10 | 5 | 10 | -- | -- | -- | -- | -- | -- | -- | -- | -- | 5 | 100 |
| 4) | ಸಿಂಗಟಾಲೂರು – ನವತಿ 2.0 ಕಿ.ಮೀ. | 2 | 2 | 5 | 1 | 5 | -- | -- | -- | -- | -- | -- | -- | -- | -- | 1 | -- | 5 | 5 | 10 | 5 | 10 | -- | -- | -- | -- | -- | -- | -- | -- | -- | 5 | 100 |
| 5) | ಮಾಗಳ – ಬಿದ್ರಳ್ಳಿ 1.5 ಕಿ.ಮೀ. | 2 | 2 | 5 | 1 | 5 | -- | -- | -- | -- | -- | -- | -- | -- | -- | 2 | -- | 5 | 5 | 10 | 5 | 10 | -- | -- | -- | -- | -- | -- | -- | -- | -- | 5 | 100 |
| 6) | ಮೈಗೂರು – ಶಿರಹಟ್ಟಿ 2.5 ಕಿ.ಮೀ. | 2 | 2 | 5 | 1 | 5 | -- | -- | -- | -- | -- | -- | -- | -- | -- | 2 | -- | 5 | 5 | 10 | 5 | 10 | -- | -- | -- | -- | -- | -- | -- | -- | -- | 5 | 100 |
| 7) | ಮಹೇಶವಾಡಗಿ ಅಸಂಗಿ 2.5 ಕಿ.ಮೀ. | 2 | 2 | 5 | 1 | 5 | -- | -- | -- | -- | -- | -- | -- | -- | -- | 2 | -- | 5 | 5 | 10 | 5 | 10 | -- | -- | -- | -- | -- | -- | -- | -- | -- | 5 | 100 |
| 8) | ಹುಣಸಿಕಟ್ಟಾ 1 ಕಿ.ಮೀ. | 1 | 2 | 5 | 1 | 5 | -- | -- | -- | -- | -- | -- | -- | -- | -- | 2 | -- | 5 | 5 | 10 | 5 | 10 | -- | -- | -- | -- | -- | -- | -- | -- | -- | 5 | 100 |
| | <u>ಗುಲ್ಬರ್ಗಾ ವಲಯ</u> | | | | | | | | | | | | | | | | | | | | | | | | | | | | | | | | |
| 9) | ಸನ್ನತಿ – ಶಿರವಾಳ 1 ಕಿ.ಮೀ. | 1 | 2 | 5 | 1 | 5 | -- | -- | -- | -- | -- | -- | -- | -- | -- | 2 | -- | 5 | 5 | 10 | 5 | 10 | -- | -- | -- | -- | -- | -- | -- | -- | -- | 5 | -- |
| 10) | ಹಾಗರಗುಂಡಿ – ಕೊಡಿ 1 ಕಿ.ಮೀ. | 1 | 2 | 5 | 1 | 5 | -- | -- | -- | -- | -- | -- | -- | -- | -- | 2 | -- | 5 | 5 | 10 | 5 | 10 | -- | -- | -- | -- | -- | -- | -- | -- | -- | 5 | -- |
| | <u>ಬಾಗಲಕೋಟ ವಲಯ</u> | | | | | | | | | | | | | | | | | | | | | | | | | | | | | | | | |
| 11) | ದೇವೂರು – ಕಟಗೂರು 1 ಕಿ.ಮೀ. | 3 | 2 | 5 | 1 | -- | -- | -- | -- | -- | -- | -- | -- | -- | -- | 2 | -- | 10 | 5 | 10 | 5 | 10 | -- | -- | -- | -- | -- | -- | -- | -- | -- | 5 | -- |
| 12) | ಸಂಗಮ ಅಡಿಹಾಳ 1 ಕಿ.ಮೀ. | 2 | 2 | 5 | 1 | -- | -- | -- | -- | -- | -- | -- | -- | -- | -- | 2 | 50 | 5 | 10 | 10 | 5 | 10 | -- | -- | -- | -- | -- | -- | -- | -- | -- | 5 | 100 |

| ಕ್ರ ಸಂ: | ವಲಯದ ಹೆಸರು | ಪ್ರಸ್ತುತ ಇರುವ ದರ | | | | | | | | | | | | | | | | ಪರಿಷ್ಕರಿಸಿರುವ ದರಗಳು | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|---|
| | | ಪ್ರಯಾಣಿಕರು | ಆಡು | ದನ | ಸೈಕಲ್ | ಮೋಟರ್ ಸೈಕಲ್ | ಬಸ್ಸು | ಕಾರು | ವ್ಯಾನ್ | ಜೀಪ್ | ಲಾರಿ | ಟಿಲ್ಲರ್ | ಟ್ರಾಕ್ಟರ್ | ಎತ್ತಿನ ಗಾಡಿ | ಆಟೋ ರಿಕ್ಷಾ | ಸರಕು ಪ್ರತಿ 50 Kg. | ವಿಶೇಷ ಟ್ರಿಪ್ ಒಂದಕ್ಕೆ | ಪ್ರಯಾಣಿಕರು | ಆಡು | ದನ | ಸೈಕಲ್ | ಮೋಟರ್ ಸೈಕಲ್ | ಬಸ್ಸು | ಕಾರು | ವ್ಯಾನ್ | ಜೀಪ್ | ಲಾರಿ | ಟಿಲ್ಲರ್ | ಟ್ರಾಕ್ಟರ್ | ಎತ್ತಿನ ಗಾಡಿ | ಆಟೋರಿಕ್ಷಾ | ಸರಕು ಪ್ರತಿ 50 Kg. | ವಿಶೇಷ ಟ್ರಿಪ್ ಒಂದಕ್ಕೆ |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 | 15 | 16 | 17 | 18 | 19 | 20 | 21 | 22 | 23 | 24 | 25 | 26 | 27 | 28 | 29 | 30 | 31 | 32 | 33 | 34 |
| 13) | ಬಾಗಲಕೋಟೆ – ಕದಾಂಪುರ 1.5 ಕಿ.ಮೀ. | 2 | 2 | 5 | 1 | -- | -- | -- | -- | -- | -- | -- | -- | -- | -- | 2 | -- | 5 | 5 | 10 | 5 | 10 | -- | -- | -- | -- | -- | -- | -- | -- | -- | 5 | -- |
| 14) | ಸಂಗಮ ನಿಲಮ್ಮನ ಗುಡಿ 5 ಕಿ.ಮೀ. | 3 | 2 | 5 | 1 | -- | -- | -- | -- | -- | -- | -- | -- | -- | -- | 2 | 50 | 50 | -- | -- | -- | 10 | -- | -- | -- | -- | -- | -- | -- | -- | -- | 5 | 100 |
| 15) | ಸಂಗಮ ಕಂಚಗನೂರು 2 ಕಿ.ಮೀ. | 5 | 2 | 5 | 1 | -- | -- | -- | -- | -- | -- | -- | -- | -- | -- | -- | -- | 10 | 10 | 10 | 10 | 10 | -- | -- | -- | -- | -- | -- | -- | -- | -- | -- | -- |
| 16) | ಪ್ರವಾಸಿಗರ ವಿಹಾರ | 5 | 2 | 5 | 0 | -- | -- | -- | -- | -- | -- | -- | -- | -- | -- | -- | -- | 10 | 10 | 10 | 10 | 10 | -- | -- | -- | -- | -- | -- | -- | -- | -- | -- | -- |
| **ಶಿವಮೊಗ್ಗ ವಲಯ** | | | | | | | | | | | | | | | | | | | | | | | | | | | | | | | | | |
| 17) | ಅಂಬರಗೊಡ್ಲು– ಕಳಸವಳ್ಳಿ 2 ಕಿ.ಮೀ. | 1 | 2 | 5 | 1 | 5 | 50 | 15 | 15 | 15 | 40 | 15 | 20 | 5 | 5 | 2 | 60 | 10 | 10 | 10 | 5 | 10 | 100 | 50 | 50 | 50 | 100 | 50 | 50 | 10 | 10 | 10 | 200 |
| 18) | ಹಸರಮಗ್ಗಿ – ಕೊಲ್ಲೂರು 1 ಕಿ.ಮೀ. | 1 | 2 | 5 | 1 | 5 | 50 | 30 | 30 | 30 | 80 | 15 | 40 | 5 | 5 | 2 | 60 | 10 | 10 | 10 | 5 | 10 | 100 | 50 | 50 | 50 | 100 | 50 | 50 | 10 | 10 | 10 | 150 |
| 19) | ತಲಕಳಲೆ – ಕುಡುಗುಂಜಿ 7 ಕಿ.ಮೀ. | 1 | 2 | 5 | 1 | 5 | -- | -- | -- | -- | -- | -- | -- | -- | -- | -- | 60 | 10 | 10 | 10 | 5 | 10 | -- | -- | -- | -- | -- | -- | -- | -- | -- | -- | 100 |

**ಎಂ. ಗಂಗಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ (ಬಂದರುಗಳು)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು ೨೦೦

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ–I | ಬೆಂಗಳೂರು, ಗುರುವಾರ, ಆಗಸ್ಟ್ ೧೮, ೨೦೧೬ (ಶ್ರಾವಣ ೨೭, ಶಕ ವರ್ಷ ೧೯೩೮) | ನಂ. ೧೦೨೬ |
|---|---|---|
| Part–I | Bengaluru, Thursday, August 18, 2016 (Shravana 27, Shaka Varsha 1938) | No. 1026 |


ಶಿಕ್ಷಣ ಸಚಿವಾಲಯ

ಕರ್ನಾಟಕ ಸರ್ಕಾರದ ನಡವಳಿಗಳು

**ವಿಷಯ:** ಶೈಕ್ಷಣಿಕ ವರ್ಷದಲ್ಲಿ 10ನೇ ತರಗತಿಯಲ್ಲಿ ಶಾಲಾ ಅಭ್ಯರ್ಥಿಯಾಗಿ ವ್ಯಾಸಂಗ ಮಾಡಿ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಅನುತ್ತೀರ್ಣರಾದ ವಿದ್ಯಾರ್ಥಿಗೆ ಪುನ: ಮುಂದಿನ ಶೈಕ್ಷಣಿಕ ವರ್ಷದಲ್ಲಿ ಶಾಲಾ ಅಭ್ಯರ್ಥಿಯಾಗಿ ಪ್ರವೇಶ ಕಲ್ಪಿಸುವ ಕುರಿತು.

**ಉಲ್ಲೇಖ:**
1. ನಿರ್ದೇಶಕರು(ಪರೀಕ್ಷೆಗಳು) ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ, ಬೆಂಗಳೂರು. ರವರ ಪ್ರಸ್ತಾವನೆ ಸಂಖ್ಯೆ:–ಸಿ1/ಎಸ್ಎಸ್ಎಲ್‌ಸಿ/ ಅನು.ವ/ಪ.ಅ/19/2016–17. ದಿನಾಂಕ:–22–06–2016.
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 169 ಎಸ್ಎಲ್‌ವಿ 2010, ದಿನಾಂಕ: 18.02.2011

**ಪ್ರಸ್ತಾವನೆ:**

ಅನುತ್ತೀರ್ಣರಾದ ವಿದ್ಯಾರ್ಥಿಗಳನ್ನು ರೆಗ್ಯುಲರ್ ವಿದ್ಯಾರ್ಥಿಗಳ ಜೊತೆಯಲ್ಲಿ ಅವಕಾಶ ಮಾಡಿದಲ್ಲಿ, ಮುಂದಿನ ವ್ಯಾಸಂಗಕ್ಕೆ ಅನುಕೂಲವಾಗುವುದರ ಜೊತೆಯಲ್ಲಿ ಶಾಲೆಯಿಂದ ಹೊರಗೆ ಉಳಿಯುವುದನ್ನು ತಪ್ಪಿಸಿದಂತಾಗುತ್ತದೆ. ರೆಗ್ಯುಲರ್ ವಿದ್ಯಾರ್ಥಿಗಳ ಜೊತೆಯಲ್ಲಿ ಶೈಕ್ಷಣಿಕ ವರ್ಷದಲ್ಲಿ ಕುಳಿತು ಶಿಕ್ಷಕರಿಂದ ಪಾಠ ಬೋಧನೆಯನ್ನು ಪಡೆದು ಪರೀಕ್ಷೆಯಲ್ಲಿ ಹಾಜರಾಗಿ ಉತ್ತೀರ್ಣರಾಗಲು ಉತ್ತಮ ಅವಕಾಶವಾಗಿದೆ. ರೆಗ್ಯುಲರ್ ವಿದ್ಯಾರ್ಥಿಗಳ ಜೊತೆಯಲ್ಲಿ ಪುನ: ಪಾಠವನ್ನು ಕೇಳುವುದರಿಂದ ಹಾಗೂ ಚಟುವಟಿಕೆಯನ್ನು ಮಾಡುವುದರಿಂದ ವಿದ್ಯಾರ್ಥಿಗಳ ಕಲಿಕೆಗೆ ಸಹಾಯವಾಗುತ್ತದೆ. ಅನುತ್ತೀರ್ಣರಾದ ವಿದ್ಯಾರ್ಥಿಗಳು ಮನೆಯಲ್ಲಿ ಓದುವುದಾದರೆ ವಿಷಯದ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಕಷ್ಟವಾಗುತ್ತದೆ. ಮನೆಯಲ್ಲಿಯೇ ಇದ್ದು ಓದುವುದರಿಂದ ಗ್ರಾಮೀಣ ಭಾಗದಲ್ಲಿ ದಿನನಿತ್ಯದ ಕೆಲಸಗಳಲ್ಲಿ ತೊಡಗಿಸಿಕೊಳ್ಳುವುದರಿಂದ ವಿದ್ಯಾರ್ಥಿಯ ಕಲಿಕೆಯು ಕುಂಟಿತವಾಗುತ್ತದೆ. ರೆಗ್ಯುಲರ್ ತರಗತಿಗೆ ಬಂದು ಪಾಠ ಕೇಳುವುದರಿಂದ ಪಾಠದ ಬೋಧನೆಯು ಪುನರಾವರ್ತನೆಯಾಗಿ ಚೆನ್ನಾಗಿ ಅರ್ಥ ಮಾಡಿಕೊಂಡು ಮುಂದಿನ ಪರೀಕ್ಷೆಗೆ ಸಹಾಯವಾಗುತ್ತದೆ. ರೆಗ್ಯುಲರ್ ತರಗತಿಗೆ ಪ್ರವೇಶ ನೀಡದಿದ್ದಲ್ಲಿ ಖಾಸಗಿ ಟ್ಯುಟೋರಿಯಲ್‌ಗಳಿಗೆ ಹೋಗಿ ಬೋಧನೆ ಪಡೆಯುವುದರಿಂದ ಪೋಷಕರಿಗೆ ಆರ್ಥಿಕ ಹೊರೆಯಾಗುತ್ತದೆ.

ಅನುತ್ತೀರ್ಣರಾದ ಶಾಲಾ ವಿದ್ಯಾರ್ಥಿಗಳು ಮರು ಶಾಲಾ ಪ್ರವೇಶ ಪಡೆಯಲು ಎಲ್ಲಾ ಆರು (06) ವಿಷಯಗಳನ್ನೂ ವ್ಯಾಸಂಗ ಮಾಡಿ ಪರೀಕ್ಷೆಗೆ ಕುಳಿತುಕೊಳ್ಳಬೇಕಾಗುತ್ತದೆ. ತೇರ್ಗಡೆಯಾದ ವಿಷಯಗಳಿಗೆ ವಿನಾಯಿತಿ ನೀಡಲು ಅವಕಾಶವಿರುವುದಿಲ್ಲ. ಶಾಲಾ ವಿದ್ಯಾರ್ಥಿಗಳಿಗೆ ಅನುಸರಿಸುವ ಎಲ್ಲಾ ಮಾನದಂಡಗಳನ್ನು ಅನುಸರಿಸಿ ಮರು ಪ್ರವೇಶ ದಾಖಲಾತಿ ಮಾಡಬೇಕಾಗುತ್ತದೆ. ಅನುತ್ತೀರ್ಣರಾದ ವಿದ್ಯಾರ್ಥಿಗಳು ಪುನ: ಶಾಲಾ ಪ್ರವೇಶ ಪಡೆದು ದಾಖಲಾಗುವುದರಿಂದ ಸಿಸಿಇ ಪದ್ಧತಿಯಲ್ಲಿ ವ್ಯಾಸಂಗ ಮುಂದುವರೆಸಬೇಕಾಗುತ್ತದೆ. ಈ ವಿದ್ಯಾರ್ಥಿಗಳೂ ಸಹ ಶಾಲಾ ವಿದ್ಯಾರ್ಥಿಗಳಂತೆಯೇ

ರೂಪಣಾತ್ಮಕ ಮೌಲ್ಯಮಾಪನಗಳನ್ನು ಮಾಡಿ, ಕಿರುಪರೀಕ್ಷೆ ಮತ್ತು ಚಟುವಟಿಕೆಗಳಲ್ಲಿ ಭಾಗವಹಿಸಿ ಆಂತರಿಕ ಮೌಲ್ಯಮಾಪನದ ಭಾಗ–ಎ ಮತ್ತು ಭಾಗ–ಬಿಗಳಲ್ಲಿ ಅಂಕ ಮತ್ತು ಶ್ರೇಣಿಯನ್ನು ಪಡೆಯಬೇಕಾಗುತ್ತದೆ. ಸರ್ಕಾರಿ ಆದೇಶ ಸಂಖ್ಯೆ: ಇಡಿ 169 ಎಸ್‌ಎಲ್‌ವಿ 2010, ದಿನಾಂಕ: 18.02.2011ರನ್ವಯ ಏಪ್ರಿಲ್ 2011ರ ನಂತರ ಪರೀಕ್ಷೆ ತೆಗೆದುಕೊಂಡ ಎಲ್ಲಾ ವಿದ್ಯಾರ್ಥಿಗಳು ಸತತ ಆರು ಪ್ರಯತ್ನಗಳಲ್ಲಿ ಎಸ್.ಎಸ್.ಎಲ್.ಸಿ ಪರೀಕ್ಷೆಯನ್ನು ತೇರ್ಗಡೆ ಹೊಂದಬೇಕು ಎಂಬ ನಿಯಮವಿರುತ್ತದೆ. ಅನುತ್ತೀರ್ಣರಾಗಿ ಪುನ: ಶಾಲಾ ಪ್ರವೇಶ ಪಡೆದ ವಿದ್ಯಾರ್ಥಿಗಳು ನಿರಂತರವಾಗಿ ಶೈಕ್ಷಣಿಕ ವರ್ಷದಲ್ಲಿ ಗೈರುಹಾಜರಾಗದೆ ಶಾಲಾ ಅಭ್ಯರ್ಥಿಗಳಾಗಿ ಆರು (06) ವಿಷಯಗಳಿಗೆ ಪರೀಕ್ಷೆಗೆ ಹಾಜರಾಗುವುದು. ಅನುತ್ತೀರ್ಣ ವಿದ್ಯಾರ್ಥಿಗಳ ಶಾಲಾ ಮರು ದಾಖಲಾತಿ ಮುಂದಿನ ಒಂದು ಶೈಕ್ಷಣಿಕ ವರ್ಷಕ್ಕೆ ಮಾತ್ರ ಸೀಮಿತಗೊಳಿಸಲು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 156 ಎಸ್‌ಎಲ್‌ಬಿ 2016, ದಿನಾಂಕ:11.08.2016**

ಮೇಲೆ ವಿವರಿಸಿದ ಅಂಶಗಳನ್ನು ವಿಷದಪಡಿಸುತ್ತಾ, ಶಾಲಾ ವಿದ್ಯಾರ್ಥಿಗಳು ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಅನುತ್ತೀರ್ಣರಾದ ವಿದ್ಯಾರ್ಥಿಗಳಿಗೆ ಪುನಃ ಮುಂದಿನ ಒಂದು ಶೈಕ್ಷಣಿಕ ವರ್ಷದಲ್ಲಿ ಶಾಲಾ ಅಭ್ಯರ್ಥಿಯಾಗಿ ಪ್ರವೇಶ ಪಡೆಯಲು ಕೆಳಕಂಡ ಷರತ್ತುಗಳನ್ವಯ ಅನುಮತಿ ನೀಡಲಾಗಿದೆ.

1. ಅನುತ್ತೀರ್ಣರಾದ ಶಾಲಾ ವಿದ್ಯಾರ್ಥಿಗಳು ಮರು ಶಾಲಾ ಪ್ರವೇಶ ಪಡೆಯಲು ಎಲ್ಲಾ ಆರು (06) ವಿಷಯಗಳನ್ನೂ ವ್ಯಾಸಂಗ ಮಾಡಿ ಪರೀಕ್ಷೆಗೆ ಕುಳಿತುಕೊಳ್ಳಬೇಕಾಗುತ್ತದೆ.
2. ತೇರ್ಗಡೆಯಾದ ವಿಷಯಗಳಿಗೆ ವಿನಾಯಿತಿ ನೀಡಲು ಅವಕಾಶವಿರುವುದಿಲ್ಲ. ಶಾಲಾ ವಿದ್ಯಾರ್ಥಿಗಳಿಗೆ ಅನುಸರಿಸುವ ಎಲ್ಲಾ ಮಾನದಂಡಗಳನ್ನು ಅನುಸರಿಸಿ ಮರು ಪ್ರವೇಶ ದಾಖಲಾತಿ ಮಾಡಬೇಕಾಗುತ್ತದೆ.
3. ಅನುತ್ತೀರ್ಣರಾದ ವಿದ್ಯಾರ್ಥಿಗಳು ಪುನ: ಶಾಲಾ ಪ್ರವೇಶ ಪಡೆದು ದಾಖಲಾಗುವುದರಿಂದ ಸಿಸಿಇ ಪದ್ಧತಿಯಲ್ಲಿ ವ್ಯಾಸಂಗ ಮುಂದುವರೆಸಬೇಕಾಗುತ್ತದೆ. ಈ ವಿದ್ಯಾರ್ಥಿಗಳೂ ಸಹ ಶಾಲಾ ವಿದ್ಯಾರ್ಥಿಗಳಂತೆಯೇ ಆಂತರಿಕ ಮೌಲ್ಯಮಾಪನದ **ಭಾಗ–ಎ** ಮತ್ತು **ಭಾಗ–ಬಿ** ಗಳಲ್ಲಿ ಅಂಕ ಮತ್ತು ಶ್ರೇಣಿಯನ್ನು ಪಡೆಯಬೇಕಾಗುತ್ತದೆ.
4. ಅನುತ್ತೀರ್ಣ ವಿದ್ಯಾರ್ಥಿಗಳ ಶಾಲಾ ಮರುದಾಖಲಾತಿ ಮುಂದಿನ ಒಂದು ಶೈಕ್ಷಣಿಕ ವರ್ಷಕ್ಕೆ ಮಾತ್ರ ಸೀಮಿತಗೊಳಿಸತಕ್ಕದ್ದು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ.ಟಿ. ರಾಜ್ಯಶ್ರೀ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ( ಪ್ರೌಢಶಿಕ್ಷಣ)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 500

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–I | ಬೆಂಗಳೂರು, ಗುರುವಾರ, ಆಗಸ್ಟ್ ೧೮, ೨೦೧೬ (ಶ್ರಾವಣ ೨೭, ಶಕ ವರ್ಷ ೧೯೩೮) | ನಂ. ೧೦೨೯ |
|---|---|---|
| *Part–I* | *Bengaluru, Thursday, August 18, 2016 (Shravana 27, Shaka Varsha 1938)* | *No. 1029* |


**ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಪಡಿತರ ಸೀಮೆಎಣ್ಣೆಯನ್ನು ಆದ್ಯರ್ಪಿಸಿ ಕೇಂದ್ರ ಸರ್ಕಾರದಿಂದ ಪಡೆಯಲಾದ ಪ್ರೋತ್ಸಾಹಧನವನ್ನು "ಉಜ್ವಲ" ಯೋಜನೆಯಡಿ ಆಯ್ಕೆಯಾದ ಫಲಾನುಭವಿಗಳಿಗೆ ಉಪಯೋಗಿಸಿಕೊಳ್ಳುವ ಬಗ್ಗೆ.

**ಪ್ರಸ್ತಾವನೆ:**

ಕೇಂದ್ರ ಸರ್ಕಾರವು 'ಉಜ್ವಲ' ಯೋಜನೆಯನ್ನು ಜಾರಿಗೆ ತಂದಿದ್ದು, ಈ ಯೋಜನೆಯಡಿ ಆರ್ಥಿಕವಾಗಿ ದುರ್ಬಲ ವರ್ಗದ ಅನಿಲ ರಹಿತ ಕುಟುಂಬಗಳಿಗೆ ಅಡಿಗೆ ಅನಿಲ ಸಂಪರ್ಕ ಕಲ್ಪಿಸುವ ಸಲುವಾಗಿ ಒಂದು ಸಿಲಿಂಡರಿಗೆ ಪಾವತಿಸುವ ಭದ್ರತಾ ಠೇವಣಿ, ಪ್ರೆಷರ್ ರೆಗ್ಯುಲೇಟರ್, ಗ್ಯಾಸ್ ಟ್ಯೂಬ್ ಮತ್ತು ಅಳವಡಿಕೆಯ ವೆಚ್ಚ ಇತ್ಯಾದಿಗೆ ಸಂಬಂಧಿಸಿದಂತೆ ರೂ.1600/–ನ್ನು ನೀಡಲಾಗುವುದು. ಇದರ ಜೊತೆಗೆ ಪ್ರತಿ ಫಲಾನುಭವಿಗೆ ಒಂದು ಸ್ಟೌವ್ ಮತ್ತು ಅನಿಲ ತುಂಬಿಸಿದ ಮೊದಲ ಸಿಲಿಂಡರ್‌ನ ವೆಚ್ಚವನ್ನು ಕೂಡ ಕಂತುಗಳಲ್ಲಿ ನೀಡಲಾಗುವುದು. ಈ ಕಂತುಗಳ ಮೊತ್ತವನ್ನು ಮುಂದಿನ ದಿನಗಳಲ್ಲಿ ಫಲಾನುಭವಿಯ ಬ್ಯಾಂಕ್ ಖಾತೆಗೆ ವರ್ಗಾವಣೆಯಾಗುವ ಸಹಾಯಧನದ ಮೊತ್ತದಿಂದ ವಸೂಲು ಮಾಡಲಾಗುವುದು.

ಉಜ್ವಲ ಯೋಜನೆಯಡಿ ಫಲಾನುಭವಿಗೆ ಅನಿಲ ಸಂಪರ್ಕವನ್ನು ನೀಡಿದ ಕೂಡಲೇ ಪಡಿತರ ಚೀಟಿಗೆ ಸೀಮೆಎಣ್ಣೆ ಹಂಚಿಕೆಯನ್ನು ನಿಲ್ಲಿಸಲಾಗುವುದು. ರಾಜ್ಯ ಸರ್ಕಾರವು ಪ್ರತಿ ಉಜ್ವಲ ಫಲಾನುಭವಿಗಳಿಗೆ ಹೆಚ್ಚುವರಿ ಸಹಾಯಧನ ರೂ.1000/–ವನ್ನು ನೀಡಲು ತೀರ್ಮಾನಿಸಿದ್ದು, ಗ್ರಾಮೀಣ ಪ್ರದೇಶದ ಫಲಾನುಭವಿಗೆ ಎರಡು ಸೋಲಾರ ದೀಪಗಳನ್ನು ನೀಡಲು ಮತ್ತು ನಗರ ಪ್ರದೇಶದ ಫಲಾನುಭವಿಗೆ ಹೆಚ್ಚುವರಿಯಾಗಿ 5 ಕೆ.ಜಿ. ಅನಿಲ ಸಿಲಿಂಡರ್ ನೀಡಲು ಸದರಿ ಮೊತ್ತವನ್ನು ಉಪಯೋಗಿಸಿಕೊಳ್ಳಬಹುದಾಗಿದೆ. ಇದರಿಂದಾಗಿ ಗ್ರಾಮೀಣ ಪ್ರದೇಶಗಳಲ್ಲಿ ಸೀಮೆಎಣ್ಣೆ ನಿಲ್ಲಿಸುವಿಕೆಯಿಂದಾಗಿ ಉಂಟಾಗುವ ಬೆಳಕಿನ ಸಮಸ್ಯೆಯ ನಿವಾರಣೆಯನ್ನು ಖಾತ್ರಿಪಡಿಸುತ್ತದೆ. ಅಲ್ಲದೇ ಗ್ರಾಮೀಣ ಪ್ರದೇಶದ ಫಲಾನುಭವಿಗಳು ಈಗಲೂ ಕೂಡ ಒಂದು ಅನಿಲ ಸಿಲಿಂಡರನ್ನು ಹೊಂದಿದ್ದರೂ, ಸಿಲಿಂಡರ್ ರೀಫಿಲಿಂಗ್‌ನ ಎರಡು ಮೂರು ದಿನಗಳ ಅವಧಿಯಲ್ಲಿ ಪರ್ಯಾಯ ಇಂಧನವಾದ ಸೌದೆಯನ್ನು ಬಳಸುವ ಮೂಲಕ ಒಂದು ಅಡಿಗೆ ಅನಿಲ ಸಿಲಿಂಡರ್‌ನಲ್ಲೇ ನಿರ್ವಹಿಸುತ್ತಿದ್ದಾರೆ. ಆದರೆ, ಇದು ನಗರ ಪ್ರದೇಶಗಳಲ್ಲಿ ಸಾಧ್ಯವಾಗದಿರಬಹುದು. ಆದ್ದರಿಂದ ನಗರ ಪ್ರದೇಶದ ಉಜ್ವಲ ಫಲಾನುಭವಿಗೆ ಅದೇ ಅಂದಾಜು ರೂ.1000/–ವೆಚ್ಚದಲ್ಲಿ ರೀಫಿಲ್ ವೆಚ್ಚದೊಂದಿಗೆ ಹೆಚ್ಚುವರಿಯಾಗಿ 5 ಕೆ.ಜಿ. ಸಾಮರ್ಥ್ಯದ ಅನಿಲ ಸಿಲಿಂಡರನ್ನು ನೀಡಬಹುದಾಗಿದೆ. ಅಲ್ಲದೆ, ಗ್ರಾಮೀಣ ಪ್ರದೇಶದ ಫಲಾನುಭವಿಗೆ ಎರಡು ಸೌರದೀಪಗಳ ಬದಲಿಗೆ 5 ಕೆ.ಜಿ. ಸಾಮರ್ಥ್ಯದ ಅನಿಲ ಸಿಲಿಂಡರ್‌ನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶವನ್ನು ನೀಡಬಹುದಾಗಿದೆ.

ಆದಾಗ್ಯೂ ಕೇಂದ್ರ ಸರ್ಕಾರವು 14.2ಕೆ.ಜಿ. ಸಾಮರ್ಥ್ಯದ ಸಿಲಿಂಡರ್ ನೀಡಲಾಗಿರುವ ಗ್ರಾಹಕರಿಗೆ 5ಕೆ.ಜಿ ಸಾಮರ್ಥ್ಯದ ಸಿಲಿಂಡರ್ ನೀಡಲು ಒಪ್ಪದಿದ್ದಲ್ಲಿ, 14.2 ಕೆ.ಜಿ. ಸಾಮರ್ಥ್ಯದ ಸಿಲಿಂಡರ್ ತೆಗೆದುಕೊಳ್ಳಲು ಉಜ್ವಲ ಫಲಾನುಭವಿಗೆ ಸಹಾಯಧನವನ್ನು ರೂ.1000/–ಕ್ಕೆ ಸೀಮಿತಗೊಳಿಸಿ ಭದ್ರತಾ ಠೇವಣಿ ವೆಚ್ಚಕ್ಕಾಗಿ ವಿಸ್ತರಿಸಬಹುದಾಗಿದೆ.

ಅದರಂತೆ ಈ ಕೆಳಕಂಡ ಆದೇಶ;

**ಸರ್ಕಾರಿ ಆದೇಶ ಸಂ: ಆನಾಸ 347 ಡಿಆರ್‌ಎ 2013, ಬೆಂಗಳೂರು, ದಿನಾಂಕ: 17ನೇ ಆಗಸ್ಟ್ 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ರಾಜ್ಯ ಸರ್ಕಾರವು ಪ್ರತಿ ಉಜ್ವಲ ಫಲಾನುಭವಿಗೆ ರೂ.1000/– ಸಹಾಯಧನವನ್ನು 5 ಕೆ.ಜಿ. ಎಲ್.ಪಿ.ಜಿ. ಸಿಲಿಂಡರ್ ಖರೀದಿಗಾಗಿ ಠೇವಣಿ ಮೊತ್ತ ಹಾಗೂ ಅನಿಲ ತುಂಬಿದ ಮೊದಲ ಸಿಲಿಂಡರ್‌ನ ವೆಚ್ಚಕ್ಕಾಗಿ ನೀಡಲು (ಭದ್ರತಾ ಠೇವಣಿ ಇಡಬೇಕಾದ 14.2ಕೆ.ಜಿ. ಸಾಮರ್ಥ್ಯದ ಸಿಲಿಂಡರ್‌ನ್ನು ತೆಗೆದುಕೊಳ್ಳುವ ಆಯ್ಕೆ ಇರುತ್ತದೆಯಾದರೂ ಪ್ರತಿ ಫಲಾನುಭವಿಗೆ ಸಹಾಯಧನದ ಮೊತ್ತವನ್ನು ರೂ.1000/–ಕ್ಕೆ ಸೀಮಿತಗೊಳಿಸಲಾಗುವುದು) ಅಥವಾ ಫಲಾನುಭವಿಯ ಆಯ್ಕೆಯಂತೆ ಎರಡು ಸೌರದೀಪಗಳ (ಗ್ರಾಮೀಣ ಪ್ರದೇಶಗಳಲ್ಲಿ ಮಾತ್ರ) ಖರೀದಿಗಾಗಿ ನೀಡಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 657/ವೆಚ್ಚ–5/2016 ದಿನಾಂಕ:25.05.2016ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಅರ್ಚನ ಎಂ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 200

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ–I | ಬೆಂಗಳೂರು, ಗುರುವಾರ, ಆಗಸ್ಟ್ ೧೮, ೨೦೧೬ (ಶ್ರಾವಣ ೨೭, ಶಕ ವರ್ಷ ೧೯೩೮) | ನಂ. ೧೦೨೮ |
| *Part–I* | *Bengaluru, Thursday, August 18, 2016 (Shravana 27, Shaka Varsha 1938)* | *No. 1028* |


**ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಸಚಿವಾಲಯ**
**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಸಾರ್ವಜನಿಕ ಪಡಿತರ ವಿತರಣಾ ಪದ್ಧತಿಯಡಿ ಆದ್ಯತೇತರ ಕುಟುಂಬಗಳನ್ನು ಗುರುತಿಸಲು ಪ್ರಸ್ತುತ ಇರುವ ಹೊರಗಿಡುವ ಮಾನದಂಡಗಳನ್ನು (Exclusion criteria) ಪರಿಷ್ಕರಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಆನಾಸ 80 ಡಿಆರ್‌ಎ 2012 ದಿನಾಂಕ 24.08.2012.

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಆರ್ಥಿಕ ಸದೃಢವಲ್ಲದ ಕುಟುಂಬಗಳನ್ನು ಗುರುತಿಸಲು 14 ಹೊರಗಿಡುವ ಮಾನದಂಡಗಳನ್ನು (Exclusion criteria) ನಿಗದಿಪಡಿಸಲಾಗಿರುತ್ತದೆ. ರಾಜ್ಯದಲ್ಲಿ ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ–2013 ಜನವರಿ–2014 ರಿಂದ ಜಾರಿಗೆ ಬಂದ ನಂತರ, ಆಹಾರ ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆಯಲ್ಲಿ ಪಡಿತರ ಚೀಟಿಗಳನ್ನು ಆದ್ಯತಾ ಹಾಗೂ ಆದ್ಯತೇತರ ಪಡಿತರ ಚೀಟಿಗಳೆಂದು ವರ್ಗೀಕರಿಸಲಾಗಿರುತ್ತದೆ. ಇದಲ್ಲದೇ ಎಎವೈ ವರ್ಗೀಕರಣದ ಪಡಿತರ ಚೀಟಿಗಳು ಸಹ ಮುಂದುವರೆದಿರುತ್ತವೆ. ಆದ್ಯತಾ ಹಾಗೂ ಎಎವೈ ಪಡಿತರ ಚೀಟಿಗಳನ್ನು ಹೊಂದಿದ ಕುಟುಂಬಗಳನ್ನು ಒಟ್ಟಾಗಿ ಅರ್ಹತಾ ಕುಟುಂಬಗಳೆಂದು ಕರೆಯಲಾಗಿದೆ. ರಾಜ್ಯದಲ್ಲಿ ರಾಷ್ಟ್ರೀಯ ಆಹಾರ ಭದ್ರತಾ ಕಾಯ್ದೆ–2013 ಜಾರಿಗೆ ಬಂದ ನಂತರ, ಸದರಿ ಕಾಯ್ದೆಯ ಸೆಕ್ಷನ್ 10ರನ್ವಯ, ಮೇಲೆ ತಿಳಿಸಿದಂತೆ 14 ಹೊರಗಿಡುವ ಮಾನದಂಡಗಳನ್ನೇ ಅನುಸರಿಸಿ, ಈ ಹಿಂದೆ ಇದ್ದ ಬಿಪಿಎಲ್ ಅಥವಾ ಆರ್ಥಿಕವಾಗಿ ಸದೃಢವಲ್ಲದ ಕುಟುಂಬಗಳನ್ನೆ ಆದ್ಯತಾ ಕುಟುಂಬಗಳೆಂದು ಪರಿಗಣಿಸಲಾಗುತ್ತಿದೆ. ಸಾರ್ವಜನಿಕರಲ್ಲಿ ಮಾನದಂಡಗಳ ಬಗ್ಗೆ ಇನ್ನು ಹೆಚ್ಚಿನ ಸ್ಪಷ್ಟತೆಯನ್ನು ತರುವ ಉದ್ದೇಶದಿಂದ ಹಾಗೂ ಮಾನದಂಡಗಳನ್ನು ಹೆಚ್ಚು ನೈಜ ಹಾಗೂ ವಸ್ತುನಿಷ್ಠ ಸ್ವರೂಪವನ್ನಾಗಿಸುವ ಸಲುವಾಗಿ ಸದರಿ ಕಾಯ್ದೆ ಸೆಕ್ಷನ್ 10(1)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ, ಪ್ರಸ್ತುತ ಚಾಲ್ತಿಯಲ್ಲಿರುವ ಮಾರ್ಗಸೂಚಿಗಳು/ಹೊರಗಿಡುವ ಮಾನದಂಡಗಳನ್ನು ರಾಜ್ಯ ಸರ್ಕಾರವು ಸರಳೀಕರಿಸಲು ತೀರ್ಮಾನಿಸಲಾಗಿದೆ. ಅದರಂತೆ, ಈ ಕೆಳಕಂಡ ಆದೇಶ;

**ಸರ್ಕಾರಿ ಆದೇಶ ಸಂ: ಆನಾಸ 116 ಡಿಆರ್‌ಎ 2015, ಬೆಂಗಳೂರು, ದಿನಾಂಕ:16ನೇ ಆಗಸ್ಟ್ 2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಮೇಲೆ ತಿಳಿಸಲಾದ ಸರ್ಕಾರಿ ಆದೇಶ ಸಂಖ್ಯೆ:ಆನಾಸ 80 ಡಿಆರ್‌ಎ 2012 ದಿನಾಂಕ:24.08.2012ನ್ನು ಈ ಮೂಲಕ ಹಿಂಪಡೆಯಲಾಗಿದೆ. ಕೂಡಲೇ ಜಾರಿಗೆ ಬರುವಂತೆ, ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಿ, ಆದ್ಯತೇತರ ಕುಟುಂಬಗಳನ್ನು ಗುರುತಿಸತಕ್ಕದ್ದು;

1) ವೇತನವನ್ನು ಗಣನೆಗೆ ತೆಗೆದುಕೊಳ್ಳದೆ ಎಲ್ಲಾ ಖಾಯಂ ನೌಕರರು ಅಂದರೆ ಸರ್ಕಾರದ ಅಥವಾ ಸರ್ಕಾರದಿಂದ ಅನುದಾನವನ್ನು ಪಡೆಯುತ್ತಿರುವ ಸಂಸ್ಥೆಗಳು ಅಥವಾ ಸರ್ಕಾರಿ ಪ್ರಾಯೋಜಿತ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು/ ಮಂಡಳಿಗಳು/ ನಿಗಮಗಳು/ ಸ್ವಾಯತ್ತ ಸಂಸ್ಥೆಗಳು ಇತ್ಯಾದಿ; ಒಳಗೊಂಡಂತೆ ಆದಾಯ ತೆರಿಗೆ/ ಸೇವಾ ತೆರಿಗೆ/ ವ್ಯಾಟ್/ವೃತ್ತಿ ತೆರಿಗೆ ಪಾವತಿಸುವ ಎಲ್ಲಾ ಕುಟುಂಬಗಳು,
2) ಗ್ರಾಮೀಣ ಪ್ರದೇಶದಲ್ಲಿ 3 ಹೆಕ್ಟೇರ್ ಒಣಭೂಮಿ ಅಥವಾ ತತ್ಸಮಾನ ನೀರಾವರಿ ಭೂಮಿ ಹೊಂದಿರುವ ಕುಟುಂಬಗಳು ಅಥವಾ ಗ್ರಾಮೀಣ ಪ್ರದೇಶವನ್ನು ಹೊರತುಪಡಿಸಿ ನಗರ ಪ್ರದೇಶಗಳಲ್ಲಿ 1000 ಚದರ ಅಡಿಗಿಂತಲೂ ಹೆಚ್ಚಿನ ವಿಸ್ತೀರ್ಣದ ಪಕ್ಕಾ ಮನೆಯನ್ನು ಸ್ವಂತವಾಗಿ ಹೊಂದಿರುವ ಕುಟುಂಬಗಳು,
3) ಜೀವನೋಪಾಯಕ್ಕಾಗಿ ಸ್ವತಃ ಓಡಿಸುವ ಒಂದು ವಾಣಿಜ್ಯ ವಾಹನವನ್ನು ಅಂದರೆ ಟ್ರಾಕ್ಟರ್, ಮ್ಯಾಕ್ಸಿಕ್ಯಾಬ್, ಟ್ಯಾಕ್ಸಿ ಇತ್ಯಾದಿಗಳನ್ನು ಹೊಂದಿದ ಕುಟುಂಬವನ್ನು ಹೊರತುಪಡಿಸಿ ನಾಲ್ಕು ಚಕ್ರದ ವಾಹನಗಳನ್ನು ಹೊಂದಿರುವ ಎಲ್ಲಾ ಕುಟುಂಬಗಳು,
4) ಪ್ರತಿ ಮಾಹೆ 150 ಯುನಿಟ್‌ಗಳಿಂತಲೂ ಹೆಚ್ಚಿನ ವಿದ್ಯುತ್‌ಚ್ಛಕ್ತಿಯನ್ನು ಬಳಕೆ ಮಾಡುವ ಕುಟುಂಬಗಳು.

ಮೇಲೆ ತಿಳಸಿರುವಂತೆ ಗುರುತಿಸಲಾದ ಆದ್ಯತೇತರ ಕುಟುಂಬಗಳನ್ನು ಹೊರತುಪಡಿಸಿ, ಉಳಿದ ಕುಟುಂಬಗಳು ಆದ್ಯತಾ ಪಡಿತರ ಚೀಟಿಯನ್ನು ಪಡೆಯಲು ಅರ್ಹ ಕುಟುಂಬವೆಂದು ಪರಿಗಣಿಸತಕ್ಕದ್ದು.

ಈ ಆದೇಶವು ತಕ್ಷಣದಿಂದಲೇ ಜಾರಿಗೆ ಬರತಕ್ಕದ್ದು:

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 672/ವೆಚ್ಚ–5/2016 ದಿನಾಂಕ:27.07.2016 ಹಾಗೂ ದಿನಾಂಕ:09.08.2016ರ ಸಚಿವ ಸಂಪುಟದ ಅನುಮೋದನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಅರ್ಚನ ಎಂ.ಎಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರಿಕ ಸರಬರಾಜು, ಗ್ರಾಹಕರ ವ್ಯವಹಾರಗಳ
ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು ೨೦೦

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–I | ಬೆಂಗಳೂರು, ಶುಕ್ರವಾರ, ಆಗಸ್ಟ್ ೧೯, ೨೦೧೬ (ಶ್ರಾವಣ ೨೮, ಶಕ ವರ್ಷ ೧೯೩೮) | ನಂ. ೧೦೩೦ |
|---|---|---|
| *Part–I* | *Bengaluru, Friday, August 19, 2016 (Shravana 28, Shaka Varsha 1938)* | *No. 1030* |


**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ದಿನಾಂಕ: 02.06.2016ರಂದು ನಡೆದ ರಾಜ್ಯ ಸರ್ಕಾರಿ ನೌಕರರ ಮುಷ್ಕರದ ಗೈರುಹಾಜರಿಯನ್ನು ಸಕ್ರಮಗೊಳಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 26 ಸೇಸವಿ 2016, ಬೆಂಗಳೂರು, ದಿನಾಂಕ: 18.08.2016.**

**ಓದಲಾಗಿದೆ:–**

ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ ಇವರ ದಿನಾಂಕ:27.06.2016ರ ಪತ್ರ ಸಂಖ್ಯೆ: ಜಿಇಎ 515/2016–17

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಕರೆಯ ಮೇರೆಗೆ ದಿನಾಂಕ: 02.06.2016ರಂದು ಮಾಡಲಾದ ಮುಷ್ಕರದ ಅವಧಿಯಲ್ಲಿ ಸರ್ಕಾರಿ ನೌಕರರ ಹಾಗೂ ಇತರ ನಿಗಮ ಮಂಡಳಿ ನೌಕರರ ಗೈರುಹಾಜರಿಯನ್ನು ನೌಕರರ ಹಕ್ಕಿನಲ್ಲಿರುವ ರಜೆ ಅಥವಾ ಅವರು ಪಡೆಯಲು ಅರ್ಹರಿರುವ ರಜೆ ಎಂದು ಪರಿಗಣಿಸಿ ಆದೇಶ ಹೊರಡಿಸಲು ಸಂಘದ ಅಧ್ಯಕ್ಷರು ಮೇಲೆ ಓದಲಾದ ದಿನಾಂಕ: 27.06.2016ರ ಪತ್ರದಲ್ಲಿ ಕೋರಿರುತ್ತಾರೆ.

ಈ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘದ ಕರೆಯ ಮೇರೆಗೆ ದಿನಾಂಕ: 02.06.2016ರಂದು ನಡೆದ ಮುಷ್ಕರದಲ್ಲಿ ಭಾಗವಹಿಸಿದ ರಾಜ್ಯ ಸರ್ಕಾರಿ ನೌಕರರ ಗೈರು ಹಾಜರಿಯನ್ನು, ಸಂಬಂಧಿತ ನೌಕರರ ಹಕ್ಕಿನಲ್ಲಿರುವ ರಜೆ ಅಥವಾ ಅವರು ಪಡೆಯಲು ಅರ್ಹರಿರುವ ಇತರೆ ರಜೆಯೆಂದು ಪರಿಗಣಿಸಲು ಆದೇಶಿಸಿದೆ.

2) ಈ ಆದೇಶವನ್ನು ಆರ್ಥಿಕ ಇಲಾಖೆ ಅದರ ದಿನಾಂಕ: 29.07.2016ರ ಟಿಪ್ಪಣಿ ಸಂಖ್ಯೆ: ಆಇ 4 ಎಸ್ಆರ್ಎಸ್ 2016 ರಲ್ಲಿ ನೀಡಿದ ಅನುಮೋದನೆಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಗಾಯತ್ರಿ. ಎಂ.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು–1)

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 50

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ–*I* | ಬೆಂಗಳೂರು, ಶುಕ್ರವಾರ, ಆಗಸ್ಟ್ ೧೯, ೨೦೧೬ (ಶ್ರಾವಣ ೨೮, ಶಕ ವರ್ಷ ೧೯೩೮) | ನಂ. ೧೦೩೨ |
| ***Part–I*** | ***Bengaluru, Friday, August 19, 2016 (Shravana 28, Shaka Varsha 1938)*** | ***No. 1032*** |


**MINORITY WELFARE, HAJ AND WAQF SECRETARIAT**

**PROCEEDINGS OF THE GOVERNMENT OF KARNATAKA**

**Sub:** Appointment of Administrator to the Karnataka State Board of Auqaf, Bangalore -reg.

**Read:** 1) Government Notification No. MWD 237 WES 2011, dated: 20-08-2011.

2) Letter No. KSBA /ADM/EST/04/2016-17, dt: 26-04-2016 of the CEO, KSBW, Bangalore.

**PREAMBLE:**

The Karnataka State Board of Auqaf, Bangalore which was constituted asper Government Notification read at (1) above for a period of five years from the date of Notification will expire on 19-08-2016.

Consequent upon Amended Act No. 27 of 2013 to the Wakf Act 1995 (Central Act), the existing Karnataka Wakf Rules 1997 has to be amended suitably asper Wakf (Amendment) Act 2013. The Government of Karnataka has constituted an Advisory Committee to draft the new Wakf Amendment Rules 2016, which will have to be vetted by the Parliamentary Affairs and Legislature Department and has to be placed before both the Houses of Legislature, which will consume time for finalizing the draft Karnataka Wakf (Amendment) Rules 2016.

Till the composition of the regular Wakf Board, it is decided to appoint an Administrator for day to day affairs of Administration of the Board for a period of **6** (**Six) Months** from the date of expiry of the present term of the Board i.e. from 20-08-2016 or until further orders.

Hence the Order,

**GOVERNMENT ORDER NO. MWD 120 WES 2016, BANGALORE, DATED: 19-08-2016.**

In view of the above circumstances, the Government is pleased to appoint **Sri Mohammad Mohsin**, **IAS**., Secretary to Government, Minority Welfare Haj & Wakf Department, Bangalore as Administrator of the Karnataka State Board of Auqaf Bangalore for a period of **6 (Six) Months** with effect from 20-08-2016 or until further orders whichever is earlier.

By Order and in the name of the Governor of Karnataka

**M. NAGARATHNA**
Joint Secretary to Government,
Minority Welfare, Haj & Waqf Department.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 200

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| | | |
|---|---|---|
| ಭಾಗ–I | ಬೆಂಗಳೂರು, ಶುಕ್ರವಾರ, ಆಗಸ್ಟ್ ೧೯, ೨೦೧೬ (ಶ್ರಾವಣ ೨೮, ಶಕ ವರ್ಷ ೧೯೩೮) | ನಂ. ೧೦೩೫ |
| *Part–I* | *Bengaluru, Friday, August 19, 2016 (Shravana 28, Shaka Varsha 1938)* | *No. 1035* |

**ಕಾರ್ಮಿಕ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಖಾಸಗಿ ವಾಣಿಜ್ಯ ವಾಹನ ಚಾಲಕರ ಅಪಘಾತ ಪರಿಹಾರ ವಿಮಾ ಯೋಜನೆಯಡಿ ನೋಂದಾಯಿತರಾಗಿರುವ ಚಾಲಕರಿಗೆ ತರಬೇತಿಯನ್ನು ಹಾಗೂ ಪ್ರೋತ್ಸಾಹಧನವನ್ನು ನೀಡುವ "ಅಪಘಾತ ಜೀವ ರಕ್ಷಕ ಯೋಜನೆ"ಯನ್ನು ಜಾರಿಗೊಳಿಸುವ ಬಗ್ಗೆ.

**ಓದಲಾಗಿದೆ:** (1) ಕಾರ್ಮಿಕ ಆಯುಕ್ತರ ಪತ್ರ ಸಂ:ಎಸಿಟಿ–1/ಸಿಆರ್–10/2016–17 ದಿ:12.05.2016.

(2) ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂ:ಆಇ 228 ವೆಚ್ಚ–9/2016, ದಿನಾಂಕ:01.04.2016.

(3) ಸ.ಆ.ಸಂ:ಕಾಇ 127 ಎಲ್ಇಟಿ 2016 ದಿ:04.05.2016.

**ಪ್ರಸ್ತಾವನೆ:**

ಮಾನ್ಯ ಮುಖ್ಯಮಂತ್ರಿಗಳು 2016–17ನೇ ಸಾಲಿನ ಆಯವ್ಯಯ ಭಾಷಣದಲ್ಲಿ, "ಖಾಸಗಿ ವಾಣಿಜ್ಯ ವಾಹನ ಚಾಲಕರ ಅಪಘಾತ ಪರಿಹಾರ ಯೋಜನೆಯಡಿ ನೋಂದಣಿ ಮಾಡಿರುವ 12 ಲಕ್ಷ ಆಟೋ ಚಾಲಕರಿಗೆ ಕಾರ್ಮಿಕ, ಒಳಾಡಳಿತ, ಸಾರಿಗೆ ಹಾಗೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗಳ ಸಹಯೋಗದೊಂದಿಗೆ ಪ್ರಥಮ ಚಿಕಿತ್ಸೆ ತರಬೇತಿ ನೀಡಿ ಅವರನ್ನು ಅಪಘಾತ ಜೀವ ರಕ್ಷಕರನ್ನಾಗಿಸುವ ನಿಟ್ಟಿನಲ್ಲಿ ರೂ.1.00 ಕೋಟಿ ಗಳ ಅನುದಾನದಲ್ಲಿ "ಅಪಘಾತ ಜೀವ ರಕ್ಷಕ" ಯೋಜನೆ"ಯನ್ನು ಜಾರಿಗೆ ತರುವುದಾಗಿ ಘೋಷಿಸಿರುತ್ತಾರೆ. ಅದರಂತೆ, ಮೇಲೆ ಓದಲಾದ (1) ಪತ್ರದಲ್ಲಿ ಕಾರ್ಮಿಕ ಆಯುಕ್ತರು ಯೋಜನೆಯನ್ನು ಅನುಷ್ಠಾನಗೊಳಿಸುವ ಬಗ್ಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ (2) ರಲ್ಲಿ 2016–17ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2230–01–103–7–03 ರಡಿ ಮುಂದುವರೆದ ಯೋಜನೆಯಾದ ಚಾಲಕರಿಗೆ ವಿಮಾ ಯೋಜನೆಗೆ ಆಯವ್ಯಯ ಘೋಷಣೆಯ 'ಅಪಘಾತ ಜೀವ ರಕ್ಷಕ' ಯೋಜನೆಗೆ ರೂ.100.00 ಲಕ್ಷಗಳನ್ನು ಸೇರಿದಂತೆ ಒಟ್ಟು ರೂ.850.00 ಲಕ್ಷಗಳನ್ನು ಒದಗಿಸಿರುತ್ತದೆ.

ಮೇಲೆ ಓದಲಾದ (3) ರಲ್ಲಿ ಕಾರ್ಮಿಕ ಇಲಾಖೆಯ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು ಮುಂದುವರೆಸಿ 2016–17ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2230–01–103–7–03 ರಡಿ ಚಾಲಕರಿಗೆ ವಿಮಾ ಯೋಜನೆಗೆ ಒಟ್ಟು ರೂ.850.00 ಲಕ್ಷಗಳನ್ನು ಒದಗಿಸಿ ಆದೇಶಿಸಲಾಗಿದೆ.

ಜಗತ್ತಿನಾದ್ಯಂತ ಸಂಭವಿಸುವ ಅಪಘಾತಗಳಲ್ಲಿ ಭಾರತವು ಹೆಚ್ಚಿನ ಸಂಖ್ಯೆಯ ಅಪಘಾತ ಪ್ರಕರಣಗಳನ್ನು ಹೊಂದಿರುವುದಾಗಿ ಪರಿಗಣಿಸಲ್ಪಟ್ಟಿದೆ. ಅಪಘಾತಕ್ಕೊಳಗಾಗುವ ಸಂತ್ರಸ್ತರಿಗೆ ಸ್ಥಳದಲ್ಲಿಯೇ ತುರ್ತು ಮಾನವೀಯ ಸಹಾಯ ಹಾಗೂ ಪ್ರಥಮ ಚಿಕಿತ್ಸೆಯನ್ನು ನೀಡಿ, ತದನಂತರ ಕ್ಲುಪ್ತಕಾಲದಲ್ಲಿ ಹೆಚ್ಚಿನ ವೈದ್ಯಕೀಯ ಚಿಕಿತ್ಸೆ ನೀಡಿದಲ್ಲಿ, ಅಪಘಾತ ಸಂತ್ರಸ್ತರನ್ನು ಪ್ರಾಣಾಪಾಯದಿಂದ ರಕ್ಷಿಸಿ, ತನ್ಮೂಲಕ ಅಂತಹವರ ಕುಟುಂಬವನ್ನು ಸಹಾ ಅತಂತ್ರದಿಂದ ಪಾರುಮಾಡಬಹುದಾಗಿರುತ್ತದೆ. ಈ ಹಿನ್ನೆಲೆಯಲ್ಲಿ, ಅಪಘಾತಕ್ಕೊಳಗಾದ ಸಂತ್ರಸ್ತರಿಗೆ ಕೂಡಲೇ ಪ್ರಥಮ ಚಿಕಿತ್ಸೆಯನ್ನು

ನೀಡಿ, ಹತ್ತಿರದ ಚಿಕಿತ್ಸಾಲಯಕ್ಕೆ ಸೇರಿಸಿ, ಸಂಬಂಧಪಟ್ಟ ಪೊಲೀಸ್ ಠಾಣೆಗೆ ಮಾಹಿತಿ ನೀಡಿ, ಆ ಮೂಲಕ ಗಾಯಾಳುವಿನ ಪ್ರಾಣ ರಕ್ಷಣೆಯನ್ನು ಮಾಡುವುದನ್ನು ಉತ್ತೇಜಿಸುವ ಮಹತ್ತರವಾದ ಸಾರ್ವಜನಿಕ ಹಿತದೃಷ್ಠಿಯಿಂದ ಕರ್ನಾಟಕ ಸರ್ಕಾರವು "ಅಪಘಾತ ಜೀವ ರಕ್ಷಕ ಯೋಜನೆ"ಯನ್ನು ಜಾರಿಗೆ ತರಲು ಉದ್ದೇಶಿಸಿದೆ. ಈ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಸರ್ಕಾರಿ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 145 ಎಲ್‌ಇಟಿ 2016, ಬೆಂಗಳೂರು, ದಿನಾಂಕ:17.08.2016**

'ಅಪಘಾತ ಜೀವರಕ್ಷಕ ಯೋಜನೆ' ಕಾರ್ಯಕ್ರಮವು ಈಗಾಗಲೇ ಜಾರಿಯಲ್ಲಿರುವ ವಾಹನ ಚಾಲಕರ ವಿಮಾ ಯೋಜನೆಗ ಪೂರಕವಾಗಿರುವುದರಿಂದ ಸದರಿ ಕಾರ್ಯಕ್ರಮವನ್ನು ಜಾರಿಯಲ್ಲಿರುವ ವಾಹನ ಚಾಲಕರ ವಿಮಾ ಯೋಜನೆ ಕಾರ್ಯಕ್ರಮಕ್ಕೆ ಹೊಂದಾಣಿಕೆ ಮಾಡಿಕೊಂಡು, 2016–17ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2230–01–103–7–03 – ಚಾಲಕರಿಗೆ ವಿಮಾ ಯೋಜನೆಯಡಿ ಒದಗಿಸಿರುವ ರೂ.850.00 ಲಕ್ಷಗಳ ಅನುದಾನದಲ್ಲಿ, ರೂ.100.00 ಲಕ್ಷಗಳನ್ನು ಬಳಸಿಕೊಂಡು 'ಅಪಘಾತ ಜೀವರಕ್ಷಕ ಯೋಜನೆ' ಯನ್ನು ಅನುಷ್ಠಾನಗೊಳಿಸಲು ಆದೇಶಿಸಿದೆ.

"ಅಪಘಾತ ಜೀವ ರಕ್ಷಕ ಯೋಜನೆ" ಯನ್ನು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿ, ಕಾರ್ಮಿಕ ಇಲಾಖೆ, ಒಳಾಡಳಿತ ಇಲಾಖೆ, ಸಾರಿಗೆ ಇಲಾಖೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಮತ್ತು ಗೃಹ ಇಲಾಖೆಗಳು ಹಾಗೂ ಇತರ ನಿಯೋಗಿಗಳ ಸಹಯೋಗದೊಂದಿಗೆ ಜಾರಿಗೊಳಿಸುವುದು.

ಈ ಯೋಜನೆಯ ಅನುಷ್ಠಾನಕ್ಕಾಗಿ 2016–17ನೇ ಸಾಲಿನ ಆಯವ್ಯಯದಡಿ ರೂ.100.00 ಲಕ್ಷ (ನೂರು ಲಕ್ಷ ರೂಪಾಯಿಗಳು) ಗಳನ್ನು ಸದರಿ ಯೋಜನೆಗಾಗಿ ಖರ್ಚು ಮಾಡಲು ಈ ಮೂಲಕ ಸರ್ಕಾರದ ಮಂಜೂರಾತಿಯನ್ನು ಕರ್ನಾಟಕ ರಾಜ್ಯ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತಾ ಮಂಡಳಿಗೆ ನೀಡಲಾಗಿದೆ.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಯೋಇ 84 ಜಶ 2016 ದಿನಾಂಕ:02.07.2016 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 459 ವೆಚ್ಚ–9/2016 ದಿನಾಂಕ:28.07.2016 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎಂ.ಸಿದ್ಧರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 100

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ–I | ಬೆಂಗಳೂರು, ಶನಿವಾರ, ಆಗಸ್ಟ್ ೨೦, ೨೦೧೬ (ಶ್ರಾವಣ ೨೯, ಶಕ ವರ್ಷ ೧೯೩೮) | ನಂ. ೧೦೩೭ |
|---|---|---|
| *Part–I* | *Bengaluru, Saturday, August 20, 2016 (Shravana 29, Shaka Varsha 1938)* | *No. 1037* |



**ಸಂಸದೀಯ ವ್ಯವಹಾರಗಳ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಅಸ್ವಾಭಿಕವಾಗಿ ಮರಣ ಹೊಂದಿದ ಶಾಸಕರಾದ ದಿವಂಗತ ಶ್ರೀ ಎ. ವೆಂಕಟೇಶ ನಾಯಕ, ಇವರ ಕುಟುಂಬದವರಿಗೆ ಪರಿಹಾರ ಧನವನ್ನು ನೀಡುವ ಕುರಿತು.

**ಓದಲಾಗಿದೆ:** (1) ದಿವಂಗತ ಶ್ರೀ ವೆಂಕಟೇಶ ನಾಯಕ್, ಇವರ ಪತ್ನಿ ಶ್ರೀಮತಿ ಸಾವಿತ್ರಿದೇವಿ ಇವರ ಮನವಿ ದಿ: 24.03.2016

(2) ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 04 ಸಂವ್ಯವಿ 97, ದಿ: 29.07.97

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿ ವಿಧಾನ ಸಭೆ ಸದಸ್ಯರಾಗಿದ್ದ ಶ್ರೀ ಎ.ವೆಂಕಟೇಶ್ ನಾಯಕ್, ದೇವದುರ್ಗ, ಇವರ ಧರ್ಮಪತ್ನಿ ಶ್ರೀಮತಿ ಸಾವಿತ್ರಿ ದೇವಿರವರು ತಮ್ಮ ಪತಿ ಅಸ್ವಾಭಾವಿಕವಾಗಿ ಮರಣ ಹೊಂದಿದ್ದರಿಂದ ನಿಗದಿತ ಪರಿಹಾರ ನೀಡುವಂತೆ ಅರ್ಜಿಯನ್ನು ಮಾನ್ಯ ಕಾನೂನು ಮತ್ತು ಸಂಸದೀಯ ವ್ಯವಹಾರಗಳು ಮತ್ತು ಸಣ್ಣ ನೀರಾವರಿ ಸಚಿವರಿಗೆ ಸಲ್ಲಿಸಿರುತ್ತಾರೆ. ಸದರಿ ಅರ್ಜಿಯೊಂದಿಗೆ ತಹಶೀಲ್ದಾರ್ ದೇವದುರ್ಗ ಇವರು ದೃಢೀಕರಿಸಿದ post mortem report ಹಾಗೂ ಇತರ ದಾಖಲೆಗಳನ್ನು ಸಲ್ಲಿಸಿರುತ್ತಾರೆ. ಇವುಗಳನ್ನು ಪರಿಶೀಲಿಸಲಾಯಿತು.

ಓದಲಾದ (2)ರ ಸರ್ಕಾರಿ ಆದೇಶದಲ್ಲಿ 1.10.1994 ರ ನಂತರ ಸಂಭವಿಸಿದ ಕರ್ನಾಟಕ ವಿಧಾನ ಸಭಾ ಸದಸ್ಯರು, ವಿಧಾನ ಪರಿಷತ್ತಿನ ಸದಸ್ಯರು ಮತ್ತು ಕರ್ನಾಟಕದಿಂದ ಚುನಾಯಿತರಾದ ಸಂಸತ್ ಸದಸ್ಯರುಗಳ ಅಸ್ವಾಭಾವಿಕ ಮರಣಗಳ ಸಂಧರ್ಭದಲ್ಲಿ ರೂ.5.00 ಲಕ್ಷ ರೂಪಾಯಿಗಳ ಪರಿಹಾರವನ್ನು ಮಂಜೂರು ಮಾಡುವ ಅಧಿಕಾರವನ್ನು ಕಾರ್ಯದರ್ಶಿ, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ ಇವರಿಗೆ ನೀಡಲಾಗಿದೆ. ಸದರಿ ಬಾಬ್ತನ್ನು ಲೆಕ್ಕ ಶೀರ್ಷಿಕೆ: "2052–ಸಚಿವಾಲಯ ಸಾಮಾನ್ಯ ಸೇವೆಗಳು–00–090–0–08 ಅಸ್ವಾಭಾವಿಕವಾಗಿ ಮರಣ ಹೊಂದಿದ್ದು, ಶಾಸಕರು ಮತ್ತು ಸಂಸತ್ ಸದಸ್ಯರ ಕುಟುಂಬಕ್ಕೆ ಪರಿಹಾರ" ದಡಿಯಲ್ಲಿ ಭರಿಸಲು ಆದೇಶಿಸಲಾಗಿದೆ.

ಆದ್ದರಿಂದ ಈ ಆದೇಶ:–

**ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 10 ಸಂವ್ಯವಿ 2016, ದಿನಾಂಕ: 20.08.2016**

ವಿಧಾನ ಸಭೆ ಸದಸ್ಯರಾಗಿದ್ದ ದಿವಂಗತ ಶ್ರೀ ಎ.ವೆಂಕಟೇಶ್ ನಾಯಕ್, ದೇವದುರ್ಗ, ಇವರು ಅಸ್ವಾಭಾವಿಕವಾಗಿ ದಿನಾಂಕ: 24.08.2015ರಂದು ಮರಣ ಹೊಂದಿದ್ದರಿಂದ ಅವರ ಪತ್ನಿ ಶ್ರೀಮತಿ ಸಾವಿತ್ರಿ ದೇವಿ, ಅರಕೇರಾ ಗ್ರಾಮ,

ದೇವದುರ್ಗ ತಾಲ್ಲೂಕು, ರಾಯಚೂರು ಜಿಲ್ಲೆ, ಇವರಿಗೆ ರೂ.5.00 ಲಕ್ಷಗಳ ಪರಿಹಾರಧನವನ್ನು ಮಂಜೂರು ಮಾಡಲಾಗಿದೆ.

ಸದರಿ ವೆಚ್ಚವನ್ನು ಲೆಕ್ಕಶೀರ್ಷಿಕೆ "2052–ಸಚಿವಾಲಯ ಸಾಮಾನ್ಯ ಸೇವೆಗಳು–00–090–0–08 ರಲ್ಲಿ ಅಸ್ವಾಭಾವಿಕವಾಗಿ ಮರಣ ಹೊಂದಿದ್ದು, ಶಾಸಕರು ಮತ್ತು ಸಂಸತ್ ಸದಸ್ಯರ ಕುಟುಂಬಕ್ಕೆ ಪರಿಹಾರ" ಶೀರ್ಷಿಕೆಯಡಿಯಲ್ಲಿ ಭರಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ದ್ವಾರಕನಾಥ್ ಬಾಬು**
ಸರ್ಕಾರದ ಕಾರ್ಯದರ್ಶಿ
ಸಂಸದೀಯ ವ್ಯವಹಾರಗಳ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 25

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

## ವಿಶೇಷ ರಾಜ್ಯ ಪತ್ರಿಕೆ

| ಭಾಗ–I | ಬೆಂಗಳೂರು, ಸೋಮವಾರ, ಆಗಸ್ಟ್ ೨೨, ೨೦೧೬ (ಶ್ರಾವಣ ೩೧, ಶಕ ವರ್ಷ ೧೯೩೮) | ನಂ. ೧೦೩೯ |
|---|---|---|
| *Part–I* | *Bengaluru, Monday, August 22, 2016 (Shravana 31, Shaka Varsha 1938)* | *No. 1039* |


**ಕರ್ನಾಟಕ ರಾಜ್ಯ ಆಡಳಿತ ನ್ಯಾಯಮಂಡಳಿಯ ನಡವಳಿಗಳು, ಬೆಂಗಳೂರು–09.**

**ವಿಷಯ:** ಕರ್ನಾಟಕ ರಾಜ್ಯ ಆಡಳಿತ ನ್ಯಾಯಮಂಡಳಿಯಲ್ಲಿ ಮುಖ್ಯ ಜಾಗೃತ ಅಧಿಕಾರಿಯನ್ನು ನೇಮಿಸುವ ಕುರಿತು.

ಉಲ್ಲೇಖ: 1) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 14 ಸೇಲೋಯು 2016, ದಿನಾಂಕ: 14–03–2016

2) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 88 ಸೇಲೋಯು 2016, ದಿನಾಂಕ: 22–06–2016

**ಪ್ರಸ್ತಾವನೆ:**

ಘನ ಕರ್ನಾಟಕ ರಾಜ್ಯ ಸರ್ಕಾರದ ಉಲ್ಲೇಖಿತ (1)ರ ದಿನಾಂಕ: 14–03–2016ರ ಆದೇಶದನ್ವಯ ರಾಜ್ಯದಲ್ಲಿ ಭ್ರಷ್ಟಾಚಾರ ತಡೆ ಅಧಿನಿಯಮ 1988ನ್ನು ಪರಿಣಾಮಕಾರಿಯಾಗಿ ಜಾರಿಗೆ ತರಲು ಹಾಗೂ ಸ್ವತಂತ್ರವಾಗಿ ತನಿಖೆ ನಡೆಸಲು ಒಂದು ಪ್ರತ್ಯೇಕ ಭ್ರಷ್ಟಾಚಾರ ನಿಗ್ರಹ ದಳವನ್ನು (Anti Corruption Bureau) ಸೃಜಿಸಲು ಆದೇಶಿಸಲಾಗಿದೆ.

ಘನ ಕರ್ನಾಟಕ ರಾಜ್ಯ ಸರ್ಕಾರದ ಉಲ್ಲೇಖಿತ (2)ರ ದಿನಾಂಕ: 22–06–2016ರ ಆದೇಶದಲ್ಲಿ, ಭ್ರಷ್ಟಾಚಾರ ನಿಗ್ರಹ ದಳವನ್ನು ಸೃಜಿಸಿ ಹೊರಡಿಸಿರುವ ಉಲ್ಲೇಖಿತ (1)ರ ದಿನಾಂಕ: 14–03–2016ರ ಸರ್ಕಾರದ ಆದೇಶದ ಕಂಡಿಕೆ (7) ರನ್ವಯ ಸರ್ಕಾರದ ಪ್ರತಿಯೊಂದು ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ, ಕ್ಷೇತ್ರ ಇಲಾಖೆ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾದ ನಿಗಮ/ಮಂಡಳಿಗಳು ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳಲ್ಲಿ ಜಾಗೃತ ಕೋಶಗಳನ್ನು ಚಾಲನೆಗೊಳಿಸುವ ನಿಟ್ಟಿನಲ್ಲಿ ಕಾರ್ಯವಿಧಾನ/ಮಾರ್ಗಸೂಚಿಗಳನ್ನು ಹೊರಡಿಸಲಾಗಿರುತ್ತದೆ.

ಉಲ್ಲೇಖಿತ (2)ರ ದಿನಾಂಕ: 22–06–2016ರ ಆದೇಶದ ಕಂಡಿಕೆ 1(2) ರಲ್ಲಿ ಸರ್ಕಾರದ ಪ್ರತಿಯೊಂದು ಕ್ಷೇತ್ರ ಇಲಾಖೆ ಮತ್ತು ಇಂಜಿನಿಯರಿಂಗ್ ಇಲಾಖೆಯನ್ನೊಳಗೊಂಡಂತೆ ನಿರ್ದೇಶನಾಲಯ/ಆಯುಕ್ತಾಲಯ, ಸಾರ್ವಜನಿಕ ಉದ್ದಿಮೆಗಳು, ಸರ್ಕಾರದಿಂದ ಸ್ಥಾಪಿತವಾಗಿರುವ ನಿಗಮ/ಮಂಡಳಿಗಳು, ಮತ್ತು ವಿಧಾನ ಮಂಡಲದ ಅಧಿನಿಯಮದಡಿ ಸ್ಥಾಪಿತವಾಗಿರುವ ಸ್ಥಳೀಯ ಸಂಸ್ಥೆಗಳು ಹಾಗೂ ಎಲ್ಲಾ ಶಾಸನಬದ್ಧ ಸಂಸ್ಥೆಗಳ ಕೇಂದ್ರಸ್ಥಾನದ ಕಛೇರಿಗಳಲ್ಲಿ ಒಂದು ಜಾಗೃತ ಕೋಶ ಇರತಕ್ಕದ್ದೆಂದೂ ಹಾಗೂ ಆಯಾ ಇಲಾಖೆ/ಸಂಸ್ಥೆಗಳ ಮುಖ್ಯಸ್ಥರ ನಂತರದ ಅಧಿಕಾರಿ (Officer next in seniority) ಯನ್ನು ಸದರಿ ಜಾಗೃತ ಕೋಶದ ಮುಖ್ಯ ಜಾಗೃತ ಅಧಿಕಾರಿಯನ್ನಾಗಿ ನೇಮಿಸಲು ಆದೇಶಿಸಲಾಗಿರುತ್ತದೆ.

ಅದರಂತೆ, ಕರ್ನಾಟಕ ರಾಜ್ಯ ಆಡಳಿತ ನ್ಯಾಯಮಂಡಳಿಗೆ ಸಂಬಂಧಿಸಿದಂತೆ, ಈ ಕೆಳಕಂಡಂತೆ ಮುಖ್ಯ ಜಾಗೃತ ಅಧಿಕಾರಿಯನ್ನು ನೇಮಿಸಿ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ ಕೆಎಟಿ/ಇಎಸ್‌ಟಿ(1)/ಡಿವಿಸಿ/22/2016, ದಿನಾಂಕ: 17–08–2016.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಆಡಳಿತ ನ್ಯಾಯಮಂಡಳಿಗೆ ಸಂಬಂಧಿಸಿದಂತೆ, ವಿಲೇಖನಾಧಿಕಾರಿ, ಕರ್ನಾಟಕ ರಾಜ್ಯ ಆಡಳಿತ ನ್ಯಾಯಮಂಡಳಿ, 6 ಮತ್ತು 7ನೇ ಮಹಡಿ, ಕಂದಾಯ ಭವನ, ಕೆಂಪೇಗೌಡ ರಸ್ತೆ, ಬೆಂಗಳೂರು–09, ಇವರನ್ನು ಮುಖ್ಯ ಜಾಗೃತ ಅಧಿಕಾರಿ (Chief Vigilance Officer) ಯನ್ನಾಗಿ ನೇಮಿಸಲಾಗಿದೆ.

**ಸನ್ಮಾನ್ಯ ಅಧ್ಯಕ್ಷರ ಆದೇಶದ ಮೇರೆಗೆ,**

**ಸಹಿ/–**

ವಿಲೇಖನಾಧಿಕಾರಿ,

ಕರ್ನಾಟಕ ರಾಜ್ಯ ಆಡಳಿತ ನ್ಯಾಯಮಂಡಳಿ,

ಬೆಂಗಳೂರು.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು ೧೦೦

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–I | ಬೆಂಗಳೂರು, ಮಂಗಳವಾರ, ಆಗಸ್ಟ್ ೨೩, ೨೦೧೬ (ಭಾದ್ರಪದ ೧, ಶಕ ವರ್ಷ ೧೯೩೮) | ನಂ. ೧೦೪೧ |
|---|---|---|
| *Part–I* | *Bengaluru, Tuesday, August 23, 2016 (Bhadrapada 1, Shaka Varsha 1938)* | *No. 1041* |


**ನಗರಾಭಿವೃದ್ಧಿ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

ವಿಷಯ:– ವಿಜಯಪುರ ಜಿಲ್ಲೆಯ ಇಂಡಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆ (ತಾತ್ಕಾಲಿಕ) ಗೆ ಸರ್ಕಾರದ ಅನುಮೋದನೆ ನೀಡುವ ಬಗ್ಗೆ.

ಓದಲಾಗಿದೆ:– 1) ಸರ್ಕಾರದ ಆದೇಶ ಸಂಖ್ಯೆ: ನಅಇ 264 ಬೆಮಪ್ರಾ 2011, ದಿನಾಂಕ: 14–09–2011.

2) ಮುಖ್ಯಾಧಿಕಾರಿ, ಪುರಸಭೆ ಯೋಜನಾ ಪ್ರಾಧಿಕಾರ, ಇಂಡಿ ಇವರ ಪತ್ರ ಸಂಖ್ಯೆ: ಮಯೋ/2016–17/695, ದಿನಾಂಕ: 08–08–2016.

3) ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ ರವರ ಏಕ ಕಡತ ಸಂಖ್ಯೆ: ನಗ್ರಾಯೋ(5)/ಇಂಡಿ/ಮಯೋ/ತಾತ್ಕಾಲಿಕ/2015–16 ರಲ್ಲಿ ದಿನಾಂಕ: 09.08.2016 ರಂದು ನೀಡಿರುವ ಅಭಿಪ್ರಾಯ.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಇಂಡಿ ಪಟ್ಟಣಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯನ್ನು ವಿಸ್ತರಿಸಿ ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ಮುಖ್ಯಾಧಿಕಾರಿಗಳು, ಇಂಡಿ ಪುರಸಭೆ ಯೋಜನಾ ಪ್ರಾಧಿಕಾರ ರವರು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 9(1) ರನ್ವಯ ಇಂಡಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ಮಹಾಯೋಜನೆ (ತಾತ್ಕಾಲಿಕ) ಅನ್ನು ಸಿದ್ಧಪಡಿಸಿ ಸರ್ಕಾರದ ಅನುಮೋದನೆಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಏಕ ಕಡತದಲ್ಲಿ ನಿರ್ದೇಶಕರು, ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆ ರವರು ಇಂಡಿ ಪಟ್ಟಣದ ಜನಸಂಖ್ಯೆಯು 2011 ರಲ್ಲಿ 38,217 ಇದ್ದು, 20 ವರ್ಷಗಳ ಯೋಜನಾ ಅವಧಿಗೆ ಅಂದರೆ, 2031 ನೇ ಇಸವಿಗೆ ಜನಸಂಖ್ಯೆಯು ಸುಮಾರು 55,500 ಆಗಬಹುದೆಂದು ಅಂದಾಜಿಸಿ ಮಹಾಯೋಜನೆಯನ್ನು ತಯಾರಿಸಲಾಗಿದೆ. ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 2176 ಹೆಕ್ಟೇರ್ ವಿಸ್ತೀರ್ಣದಲ್ಲಿ 1471.27 ಹೆಕ್ಟೇರ್ ಪ್ರದೇಶವನ್ನು ನಗರೀಕರಣ ಎಲ್ಲೆಯೆಂದು ಪ್ರಸ್ತಾಪಿಸಿ ಯೋಜನೆಯನ್ನು ರೂಪಿಸಲಾಗಿದೆ. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961 ರ ಕಲಂ (12) ರಲ್ಲಿ ನಿಗದಿಪಡಿಸಿರುವ ಅಂಶಗಳನ್ನು ಪರಿಗಣಿಸಿ ನಗರದ ಮುಂದಿನ ಯೋಜಿತ ಬೆಳವಣಿಗೆಗೆ ಪ್ರಸ್ತಾಪಿಸಿರುವ 1471.27 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 949.16 ಹೆಕ್ಟೇರ್ (ಶೇ.64.51), ವಾಣಿಜ್ಯಕ್ಕಾಗಿ 86.85 ಹೆಕ್ಟೇರ್ (ಶೇ.5.90), ಕೈಗಾರಿಕೆಗಾಗಿ 64.46 ಹೆಕ್ಟೇರ್ (ಶೇ.4.38), ಸಾರ್ವಜನಿಕ / ಅರೆ ಸಾರ್ವಜನಿಕ

ಉಪಯೋಗಕ್ಕೆ 89.38 ಹೆಕ್ಟೇರ್ (ಶೇ.6.07), ನಾಗರೀಕ ಸೌಲಭ್ಯಕ್ಕಾಗಿ 0.84 ಹೆಕ್ಟೇರ್ (ಶೇ.0.06), ಉದ್ಯಾನವನ ಮತ್ತು ಬಯಲು ಜಾಗಕ್ಕಾಗಿ 95.77 ಹೆಕ್ಟೇರ್ (ಶೇ.6.51) ಹಾಗೂ ಸಾರಿಗೆ / ಸಂಪರ್ಕ ವಲಯಕ್ಕೆ 184.81 ಹೆಕ್ಟೇರ್ (ಶೇ. 12.57) ಮೀಸಲಿಟ್ಟು ಭೂ ಉಪಯೋಗವನ್ನು ನಿಗಧಿಪಡಿಸಲಾಗಿದೆ. ಮಹಾಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961 ರ ಕಲಂ 13(1) ರನ್ವಯ ತಾತ್ಕಾಲಿಕ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 247 ಬೆಮಪ್ರಾ 2016, ಬೆಂಗಳೂರು, ದಿನಾಂಕ: 22.08.2016**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಇಂಡಿ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961 ರ ಪ್ರಕರಣ 13(1) ರನ್ವಯ ಸರ್ಕಾರದ **ತಾತ್ಕಾಲಿಕ ಅನುಮೋದನೆಯನ್ನು** ನೀಡಲಾಗಿದೆ.

1. ಸಾರ್ವಜನಿಕ ಉದ್ದೇಶಕ್ಕೆ ನಿಗಧಿಪಡಿಸಬೇಕಾದ ಸ್ಥಳಗಳನ್ನು ಅವಶ್ಯಕ್ಕೆ ಅನುಗುಣವಾಗಿ ನಿಗಧಿಪಡಿಸತಕ್ಕದ್ದು.

ಮಹಾಯೋಜನೆಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ನಾಗರಾಜ**
ಸರ್ಕಾರದ ಅಧೀನ ಕಾರ್ಯದರ್ಶಿ
ನಗರಾಭಿವೃದ್ಧಿ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 50

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–I | ಬೆಂಗಳೂರು, ಮಂಗಳವಾರ, ಆಗಸ್ಟ್ ೨೩, ೨೦೧೬ (ಭಾದ್ರಪದ ೧, ಶಕ ವರ್ಷ ೧೯೩೮) | ನಂ. ೧೦೪೩ |
|---|---|---|
| *Part–I* | *Bengaluru, Tuesday, August 23, 2016 (Bhadrapada 1, Shaka Varsha 1938)* | *No. 1043* |


**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಕರ್ನಾಟಕ ಸರ್ಕಾರದ ನಡವಳಿಗಳು**

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯ ನೌಕರರ ಸಂಘದ ವಜ್ರಮಹೋತ್ಸವ ಸಮಾರಂಭಕ್ಕೆ ಹಾಜರಾಗುವ ಸಚಿವಾಲಯದ ಅಧಿಕಾರಿ/ನೌಕರರಿಗೆ ವಿಶೇಷ ಸಾಂದರ್ಭಿಕ ರಜೆ ಮಂಜೂರು ಮಾಡುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 27 ಸೇಸವಿ 2016 ಬೆಂಗಳೂರು, ದಿನಾಂಕ: 23.08.2016**

**ಓದಲಾಗಿದೆ:–**

ಅಧ್ಯಕ್ಷರು, ಕರ್ನಾಟಕ ಸರ್ಕಾರ ಸಚಿವಾಲಯದ ನೌಕರರ ಸಂಘ ಇವರ ಪತ್ರ ಸಂಖ್ಯೆ: ಕಸಸ:ನೌಸಂ/01/ವಮಅ/2016, ದಿನಾಂಕ:04.07.2016.

**ಪ್ರಸ್ತಾವನೆ:–**

ಕರ್ನಾಟಕ ಸರ್ಕಾರ ಸಚಿವಾಲಯದ ನೌಕರರ ಸಂಘವು ತನ್ನ ಸಾಧನೆಯ ಸಾರ್ಥಕ 67 ವಸಂತಗಳನ್ನು ಕಂಡಿರುವ ಈ ಸುಸಂದರ್ಭದಲ್ಲಿ ಸಂಘದ ವಜ್ರ ಮಹೋತ್ಸವ ಸಮಾರಂಭವನ್ನು ದಿನಾಂಕ: 25.08.2016 ಮತ್ತು 26.08.2016ರಂದು ಎರಡು ದಿನಗಳ ಕಾಲ ನಡೆಸಲು ತೀರ್ಮಾನಿಸಿದೆ. ಈ ಸಂದರ್ಭದಲ್ಲಿ ನೌಕರರ ದಕ್ಷತೆ, ಆಡಳಿತ ಸುಧಾರಣೆಗೆ ಸಂಬಂಧಪಟ್ಟಂತೆ ವಿಚಾರ ಸಂಕಿರಣಗಳು ಮತ್ತು ಕೇಂದ್ರ ಮತ್ತು ನೆರೆಹೊರೆ ರಾಜ್ಯಗಳ ಸಚಿವಾಲಯ ನೌಕರ ಸಂಘದ ಮುಖಂಡರೊಂದಿಗೆ ಸಚಿವಾಲಯ ಆಡಳಿತ ವ್ಯವಸ್ಥೆ ಸುಧಾರಣೆ ಬಗ್ಗೆ ವಿಚಾರ/ಸಂವಾದ ಮುಂತಾದ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವ ಹಿನ್ನೆಲೆಯಲ್ಲಿ ದಿನಾಂಕ: 25.08.2016 ಮತ್ತು 26.08.2016ರಂದು ಅದರಲ್ಲಿ ಭಾಗವಹಿಸುವ ಸಚಿವಾಲಯದ ಎಲ್ಲಾ ಅಧಿಕಾರಿ/ನೌಕರರಿಗೆ ಎರಡು ದಿನಗಳ ವಿಶೇಷ ಸಾಂದರ್ಭಿಕ ರಜೆ/ಓ.ಓ.ಡಿ. ಸೌಲಭ್ಯವನ್ನು ಮಂಜೂರು ಮಾಡುವಂತೆ ಅಧ್ಯಕ್ಷರು, ಕರ್ನಾಟಕ ಸರ್ಕಾರ ಸಚಿವಾಲಯದ ನೌಕರರ ಸಂಘ ಇವರು ಮೇಲೆ ಓದಲಾದ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಪ್ರಸ್ತುತ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ದಿನಾಂಕ: 25.08.2016 ಮತ್ತು 26.08.2016ರಂದು ಬೆಂಗಳೂರಿನಲ್ಲಿ ನಡೆಯಲಿರುವ ಕರ್ನಾಟಕ ಸರ್ಕಾರ ಸಚಿವಾಲಯದ ನೌಕರರ ಸಂಘವು ಏರ್ಪಡಿಸಿರುವ ವಿಚಾರ ಕಮ್ಮಟ/ಸಂವಾದ ಮುಂತಾದ ಕಾರ್ಯಕ್ರಮಗಳಲ್ಲಿ

**ಅನುಬಂಧ**

| ಕ್ರ. ಸಂ. | ತಾಲ್ಲೂಕಿನ ಹೆಸರು | ಗ್ರಾಮಪಂಚಾಯಿತಿ ಹೆಸರು | ಕ್ಷೇತ್ರದ ಸಂಖ್ಯೆ ಮತ್ತು ಹೆಸರು | ಖಾಲಿ ಸ್ಥಾನಗಳ ಸಂಖ್ಯೆ | ಮೀಸಲಾತಿ ವಿವರ |
|---|---|---|---|---|---|
| 1 | 2 | 3 | 4 | 5 | 6 |
| 1 | ತುಮಕೂರು | 4–ಚಿಕ್ಕತೊಟ್ಲುಕೆರೆ | 1–ಚಿಕ್ಕತೊಟ್ಲುಕೆರೆ–1 | 1 | ಹಿಂದುಳಿದ ವರ್ಗ–ಅ |
| 2 | ತುಮಕೂರು | 7–ಸ್ವಾಂದೇನಹಳ್ಳಿ | 6–ಯಲ್ಲಾಪುರ–2 | 1 | ಸಾಮಾನ್ಯ (ಮಹಿಳೆ) |
| 3 | ತುಮಕೂರು | 15–ಊರ್ಡಿಗೆರೆ | 1–ಊರ್ಡಿಗೆರೆ–1 | 1 | ಪರಿಶಿಷ್ಟ ಜಾತಿ |
| 4 | ತುಮಕೂರು | 27–ಹೆಬ್ಬೂರು | 2–ಹೆಬ್ಬೂರು–2 | 1 | ಸಾಮಾನ್ಯ |
| 5 | ಕುಣಿಗಲ್ | 5–ಮಡಿಕೆಹಳ್ಳಿ | 3–ಮೆಣಸಿನಹಳ್ಳಿ | 1 | ಸಾಮಾನ್ಯ |
| 6 | ಕುಣಿಗಲ್ | 14–ಕೆಂಪನಹಳ್ಳಿ | 6–ಕಡಸಿಂಗನಹಳ್ಳಿ | 1 | ಪರಿಶಿಷ್ಟ ಪಂಗಡ (ಮಹಿಳೆ) |
| 7 | ಕುಣಿಗಲ್ | 22–ಹುಲಿಯೂರುದುರ್ಗ | 3–ಹುಲಿಯೂರುದುರ್ಗ | 1 | ಸಾಮಾನ್ಯ |
| 8 | ಗುಬ್ಬಿ | 9–ಇರಕಸಂದ್ರ | 5–ಸಿ.ನಂದಿಹಳ್ಳಿ | 1 | ಪರಿಶಿಷ್ಟ ಜಾತಿ |
| 9 | ಗುಬ್ಬಿ | 19–ಅಡಗೂರು | 1–ಅಡಗೂರು–1 | 1 | ಪರಿಶಿಷ್ಟ ಜಾತಿ |
| 10 | ತಿಪಟೂರು | 9–ಕರಡಿ | ಸಿಡ್ಲೇಹಳ್ಳಿ–3 | 1 | ಸಾಮಾನ್ಯ |
| 11 | ತಿಪಟೂರು | 11–ಅರಳಗುಪ್ಪೆ | ಅರಳಗುಪ್ಪೆ–2 | 1 | ಪರಿಶಿಷ್ಟ ಜಾತಿ |
| 12 | ತುರುವೇಕೆರೆ | 17–ದಬ್ಬೇಘಟ್ಟ | 01–ದಬ್ಬೇಘಟ್ಟ | 1 | ಪರಿಶಿಷ್ಟ ಪಂಗಡ (ಮಹಿಳೆ) |
| 13 | ತುರುವೇಕೆರೆ | 17–ದಬ್ಬೇಘಟ್ಟ | 5–ವಡಕೇಘಟ್ಟ | 1 | ಹಿಂದುಳಿದ ವರ್ಗ–ಅ |
| 14 | ಮಧುಗಿರಿ | 19–ಕಡಗತ್ತೂರು | 5–ಪರ್ತಿಹಳ್ಳಿ | 1 | ಸಾಮಾನ್ಯ (ಮಹಿಳೆ) |
| 15 | ಮಧುಗಿರಿ | 37–ರಂಟವಳಲು | 3–ಮಾಯಗೊಂಡನಹಳ್ಳಿ | 1 | ಸಾಮಾನ್ಯ (ಮಹಿಳೆ) |
| 16 | ಶಿರಾ | 16–ಲಕ್ಷ್ಮೀಸಾಗರ | 9–ಜಿ.ರಂಗನಹಳ್ಳಿ | 1 | ಸಾಮಾನ್ಯ |
| 17 | ಶಿರಾ | 18–ಕೊಟ್ಟ | 6–ರಂಗಾಪುರ | 1 | ಸಾಮಾನ್ಯ |
| 18 | ಶಿರಾ | 30–ಶೀಬಿ | 2–ಕಲ್ಲಶೆಟ್ಟಿಹಳ್ಳಿ | 1 | ಪರಿಶಿಷ್ಟ ಪಂಗಡ |
| 19 | ಶಿರಾ | 40–ಯಲದಬಾಗಿ | 2–ಯಲದಬಾಗಿ–2 | 1 | ಪರಿಶಿಷ್ಟ ಪಂಗಡ |
| 20 | ಕೊರಟಗೆರೆ | 12–ಬೈಚಾಪುರ | 5–ಬುಡ್ಡೇನಹಳ್ಳಿ | 1 | ಸಾಮಾನ್ಯ |
| 21 | ಕೊರಟಗೆರೆ | 17–ಕ್ಯಾಮೇನಹಳ್ಳಿ | 3–ಕೋಡ್ಲಹಳ್ಳಿ | 1 | ಪರಿಶಿಷ್ಟ ಪಂಗಡ |
| 22 | ಕೊರಟಗೆರೆ | 23–ಕೋಳಾಲ | 3–ನರಸಾಪುರ | 1 | ಸಾಮಾನ್ಯ |
| 23 | ಪಾವಗಡ | 23–ಸಾಸಲಕುಂಟೆ | 6–ಕೆಂಚಮ್ಮನಹಳ್ಳಿ–2 | 1 | ಸಾಮಾನ್ಯ |

ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ ಅಧಿನಿಯಮ, 1993ರ ಪ್ರಕರಣ 308ಎಸಿ ರಂತೆ ಚುನಾವಣಾ ನೀತಿ ಸಂಹಿತೆಯು ಚುನಾವಣೆ ನಡೆಯುವ ಗ್ರಾಮಪಂಚಾಯತಿ ವ್ಯಾಪ್ತಿಯಲ್ಲಿ ದಿನಾಂಕ 16.08.2016 ರಿಂದ 31.08.2016 ರವರೆಗೆ ಜಾರಿಯಲ್ಲಿರುತ್ತದೆ. ಇದು ಬರ ಕಾಮಗಾರಿ, ಪ್ರವಾಹ ಇತ್ಯಾದಿ ಪ್ರಕೃತಿ ವಿಕೋಪ ಕಾರ್ಯಕ್ರಮಗಳಿಗೆ ಅನ್ವಯಿಸುವುದಿಲ್ಲ.

**ಕೆ.ಪಿ. ಮೋಹನ್‌ರಾಜ್**
ಜಿಲ್ಲಾಧಿಕಾರಿ,
ತುಮಕೂರು ಜಿಲ್ಲೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 50

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ



| ಭಾಗ-III | ಬೆಂಗಳೂರು, ಗುರುವಾರ, ಆಗಸ್ಟ್ ೧೮, ೨೦೧೬ (ಶ್ರಾವಣ ೨೭, ಶಕ ವರ್ಷ ೧೯೩೮) | ನಂ. ೧೦೨೫ |
|---|---|---|
| *Part–III* | *Bengaluru, Thursday, August 18, 2016 (Shravana 27, Shaka Varsha 1938)* | *No. 1025* |



**ಜಿಲ್ಲಾಧಿಕಾರಿಯವರ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು.**

**ತಿದ್ದುಪಡಿ ಅಧಿಸೂಚನೆ**

**ನಂ. ಚು(2)ವಿವ/20/2016–17, ದಿನಾಂಕ :16–08–2016**

**ಪ್ರಪತ್ರ–2**

**(12(2)ನೇ ನಿಯಮವನ್ನು ನೋಡಿ)**

1993ರ ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮದ ಉಪಬಂಧಗಳ ಮೇರೆಗೆ ತುಮಕೂರು ಜಿಲ್ಲೆಗೆ ಸಂಬಂಧಿಸಿದಂತೆ, ತುಮಕೂರು ಜಿಲ್ಲೆಯ ತುಮಕೂರು, ಗುಬ್ಬಿ, ಕುಣಿಗಲ್, ತಿಪಟೂರು, ತುರುವೇಕೆರೆ, ಮಧುಗಿರಿ, ಶಿರಾ, ಕೊರಟಗೆರೆ ಮತ್ತು ಪಾವಗಡ ತಾಲ್ಲೂಕುಗಳಲ್ಲಿನ ವಿವಿಧ ಗ್ರಾಮಪಂಚಾಯತಿಗಳ ಒಟ್ಟು 23 ಸದಸ್ಯ ಸ್ಥಾನಗಳಿಗೆ ಉಪ ಚುನಾವಣೆ ನಡೆಸಲು ಸಮಸಂಖ್ಯೆ ಮತ್ತು ದಿನಾಂಕದಲ್ಲಿ ಅಧಿಸೂಚನೆ ಹೊರಡಿಸಲಾಗಿತ್ತು.

ಈ ಪೈಕಿ ಶಿರಾ ತಾಲ್ಲೂಕು ತಹಸೀಲ್ದಾರರ ವರದಿಯಂತೆ ಶಿರಾ ತಾಲ್ಲೂಕು, 40–ಯಲದಬಾಗಿ, 02–ಯಲದಬಾಗಿ–2 ಕ್ಷೇತ್ರದ ಪರಿಶಿಷ್ಟ ಪಂಗಡ ಸದಸ್ಯ ಸ್ಥಾನಕ್ಕೆ ಈಗಾಗಲೇ ಮಾರ್ಚ್/ಏಪ್ರಿಲ್ 2016 ರಲ್ಲಿ ನಡೆದ ಉಪ ಚುನಾವಣೆಯಲ್ಲಿ ಅವಿರೋಧವಾಗಿ ಆಯ್ಕೆಯಾಗಿರುವುದರಿಂದ, ಸದರಿ ಸದಸ್ಯ ಸ್ಥಾನವು ಖಾಲಿ ಇರುವುದಿಲ್ಲ. ಆದುದರಿಂದ, 40–ಯಲದಬಾಗಿ, 02–ಯಲದಬಾಗಿ–2 ಕ್ಷೇತ್ರದ ಉಪ ಚುನಾವಣಾ ಪ್ರಕ್ರಿಯೆಯನ್ನು ರದ್ದುಪಡಿಸಿದೆ ಮತ್ತು ಈಗಾಗಲೇ ಹೊರಡಿಸಿರುವ ಅಧಿಸೂಚನೆಯಲ್ಲಿ ನಮೂದಿಸಿರುವ ಉಳಿಕೆ 22 ಸದಸ್ಯ ಸ್ಥಾನಗಳಿಗೆ ನಿಗದಿತ ವೇಳಾಪಟ್ಟಿಯಂತೆ ಉಪ ಚುನಾವಣೆ ನಡೆಸಲಾಗುವುದು.

**ಕೆ.ಪಿ. ಮೋಹನ್‌ರಾಜ್**
ಜಿಲ್ಲಾಧಿಕಾರಿ,
ತುಮಕೂರು ಜಿಲ್ಲೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 50

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ


| ಭಾಗ–III | ಬೆಂಗಳೂರು, ಶುಕ್ರವಾರ, ಆಗಸ್ಟ್ ೧೯, ೨೦೧೬ (ಶ್ರಾವಣ ೨೮, ಶಕ ವರ್ಷ ೧೯೩೮) | ನಂ. ೧೦೩೬ |
|---|---|---|
| Part–III | Bengaluru, Friday, August 19, 2016 (Shravana 28, Shaka Varsha 1938) | No. 1036 |


**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ನಅಇ 95 ಎಂಎಲ್‌ಆರ್ 2016, ಬೆಂಗಳೂರು, ದಿನಾಂಕ:19–08–2016.**

ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ (ಚುನಾವಣೆ) ನಿಯಮಾವಳಿಗಳು 1979ರ 68ನೇ ನಿಯಮದೊಂದಿಗೆ ಓದಲಾದ 1976ರ ಕರ್ನಾಟಕ ಮುನಿಸಿಪಲ್ ಕಾರ್ಪೋರೇಷನ್ ನಿಯಮಗಳ ಅಧಿನಿಯಮ (1977ರ ಕರ್ನಾಟಕ ಅಧಿನಿಯಮ ಸಂಖ್ಯೆ:14)ರ 32ನೇ ಪ್ರಕರಣದ ಉಪಬಂಧಗಳಿಗೆ ಅನುಸಾರವಾಗಿ ದಿನಾಂಕ:30–07–2016 ರಂದು ನಡೆದ 3ನೇ ಅವಧಿಯ ಮೇಯರ್ ಹಾಗೂ ಉಪಮೇಯರ್ ಚುನಾವಣೆಯಲ್ಲಿ ವಿಜಯಪುರ ಮಹಾನಗರಪಾಲಿಕೆಗೆ ಮೇಯರ್ ಹಾಗೂ ಉಪ ಮೇಯರ್ ಆಗಿ ಈ ಕೆಳಕಂಡ ಅಭ್ಯರ್ಥಿಗಳು ಆಯ್ಕೆಯಾಗಿದ್ದು, ಸದರಿ ಅಭ್ಯರ್ಥಿಗಳ ಹೆಸರನ್ನು ಈ ಮೂಲಕ ಸಾರ್ವಜನಿಕ ಮಾಹಿತಿಗಾಗಿ ಪ್ರಕಟಿಸಲಾಗಿದೆ.

| *ಕ್ರ. ಸಂ.* | *ಆಯ್ಕೆಯಾದ ಅಭ್ಯರ್ಥಿಯ ಹೆಸರು ಮತ್ತು ವಿಳಾಸ* |
|---|---|
| **ಮಹಾಪೌರ ಸ್ಥಾನಕ್ಕೆ** | |
| 1 | ಶ್ರೀಮತಿ ಬಕ್ಷಿ ಅನೀಸಫಾತಿಮಾ ಇದ್ರೀಸಪಾಶಾ |
| **ಉಪ ಮಹಾಪೌರ ಸ್ಥಾನಕ್ಕೆ** | |
| 2 | ಶ್ರೀ ಗೋಪಾಲ ಸದಾಶಿವ ಘಟಕಾಂಬಳೆ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸಿದ್ಧಿಕ್ ಪಾಷ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 25

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–*III* | ಬೆಂಗಳೂರು, ಶುಕ್ರವಾರ, ಆಗಸ್ಟ್ ೨೬, ೨೦೧೬ (ಭಾದ್ರಪದ ೪, ಶಕ ವರ್ಷ ೧೯೩೮) | ನಂ. ೧೦೪೮ |
|---|---|---|
| ***Part–III*** | ***Bengaluru, Friday, August 26, 2016 (Bhadrapada 4, Shaka Varsha 1938)*** | ***No. 1048*** |


**URBAN DEVELOPMENT SECRETARIAT**

**NOTIFICATION**

**No. UDD 25 MLR 2016(1), Bengaluru, Dated: 26.08.2016**

In partial modification of the Notification No. UDD 25 MLR 2016(1) Dated:24.02.2016, 01.03.2016 & 04.03.2016 Government are here by allots the Offices of the President in respect of the following CITY MUNICIPAL COUNCILS for the EIGHTH TERM as detailed below:

| **Sl. No.** | **Name of the City Municipal Council** | **President** |
|---|---|---|
| **1** | **2** | **3** |
| 1 | Robertsonpet [K.G.F.] | G |
| 2 | Mulbagilu | G(W) |
| 3 | Chikkamagaluru | G |
| 4 | Kolar | BCB |

By order and in the name of the Governor of Karnataka

**Siddiq Pasha**
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 50

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–*III* | ಬೆಂಗಳೂರು, ಶುಕ್ರವಾರ, ಆಗಸ್ಟ್ ೨೬, ೨೦೧೬ (ಭಾದ್ರಪದ ೪, ಶಕ ವರ್ಷ ೧೯೩೮) | ನಂ. ೧೦೪೯ |
|---|---|---|
| ***Part–III*** | ***Bengaluru, Friday, August 26, 2016 (Bhadrapada 4, Shaka Varsha 1938)*** | ***No. 1049*** |


**URBAN DEVELOPMENT SECRETARIAT**

**NOTIFICATION**

**No. UDD 25 MLR 2016(2), Bengaluru, Dated: 26.08.2016**

In partial modification of the Notification No. UDD 25 MLR 2016(2) Dated:24.02.2016, 01.03.2016, 04.03.2016 and 17.05.2016, Government are here by allots the Office of the President & Vice President in respect of the following TOWN MUNICIPAL COUNCIL for the EIGHTH TERM as detailed below:

| Sl. No. | Name of the Town Municipal Council | President |
|---|---|---|
| **1** | **2** | **3** |
| 1 | Byadagi | G |
| 2 | Sanduru | G |
| 3 | Vijayapura | G |
| 4 | Srinivasapura | G(W) |

| Sl. No. | Name of the Town Municipal Council | Vice President |
|---|---|---|
| **1** | **2** | **3** |
| 1 | Nelamangala | BCA(W) |
| 2 | Devanahalli | BCA(W) |
| 3 | Srinivasapura | BCA |

By order and in the name of the Governor of Karnataka

**Siddiq Pasha**
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 50

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–*III* | ಬೆಂಗಳೂರು, ಶುಕ್ರವಾರ, ಆಗಸ್ಟ್ ೨೬, ೨೦೧೬ (ಭಾದ್ರಪದ ೪, ಶಕ ವರ್ಷ ೧೯೩೮) | ನಂ. ೧೦೫೦ |
|---|---|---|
| ***Part–III*** | ***Bengaluru, Friday, August 26, 2016 (Bhadrapada 4, Shaka Varsha 1938)*** | ***No. 1050*** |


**URBAN DEVELOPMENT SECRETARIAT**

**NOTIFICATION**

**No. UDD 25 MLR 2016(3), Bengaluru, Dated: 26.08.2016**

In partial modification of the Notification No. UDD 25 MLR 2016(3) Dated:24.02.2016, 01.03.2016, 04.03.2016, 03.05.2016, 04.06.2016 and 19.07.2016 Government are here by allots the Office of the President in respect of the following TOWN PANCHAYAT for the EIGHTH TERM as detailed below:

| Sl. No. | Name of the Town Panchayat | President |
|---|---|---|
| **1** | **2** | **3** |
| 1 | Alnavar | BCA |
| 2 | Narasimharajapura | G |
| 3 | Mudigere | BCA(W) |

By order and in the name of the Governor of Karnataka

**Siddiq Pasha**
Under Secretary to Government
Urban Development Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 50

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ – III<br>Part – III | ಬೆಂಗಳೂರು, ಶನಿವಾರ, ಆಗಸ್ಟ್ ೨೭, ೨೦೧೬ (ಭಾದ್ರಪದ ೫, ಶಕ ವರ್ಷ ೧೯೩೮)<br>Bengaluru, Saturday, August 27, 2016 (Bhadrapada 5, Shaka Varsha 1938) | ನಂ. ೧೦೫೪<br>No. 1054 |
|---|---|---|

ನೋಂದಣಿ ಮತ್ತು ಮುದ್ರಾಂಕ ಇಲಾಖೆ

ತಿದ್ದುಪಡಿ ಅಧಿಸೂಚನೆ.

ಸಂಖ್ಯೆ: ಜಿ.ನೋ.ಚಿ/ಸಿವಿಸಿ/01/2015-16, ಚಿಕ್ಕಬಳ್ಳಾಪುರ. ದಿ:26/07/2016

ಚಿಕ್ಕಬಳ್ಳಾಪುರ, ಜಿಲ್ಲೆಯ ಜಿಲ್ಲಾ ನೋಂದಣಿ ಕಛೇರಿ ವ್ಯಾಪ್ತಿಯ ಸ್ಥಿರಾಸ್ತಿಗಳ ನೋಂದಣಿಗಾಗಿ, ಅಂದಾಜು ಸರಾಸರಿ ಮಾರುಕಟ್ಟೆ ಮೌಲ್ಯ ಮಾರ್ಗಸೂಚಿಯ ದರಪಟ್ಟಿಯ ಅಧಿಸೂಚನೆಯನ್ನು ದಿನಾಂಕ:26/03/2016 ರಂದು ಅಧಿಕೃತವಾಗಿ ಪ್ರಕಟವಾದ ಕರ್ನಾಟಕ ರಾಜ್ಯಪತ್ರದ ವಿಶೇಷ ರಾಜ್ಯ ಪತ್ರಿಕೆಯ ಅಧಿಸೂಚನೆಯಲ್ಲಿ ಮಾಡಲಾಗಿರುವ ತಿದ್ದುಪಡಿಗಳನ್ನು ಈ ಕೆಳಕಂಡಂತೆ ಓದಿಕೊಳ್ಳತಕ್ಕದ್ದು.

ಜಿಲ್ಲಾ ನೋಂದಣಿ ಕಛೇರಿ– ಚಿಕ್ಕಬಳ್ಳಾಪುರ.

| ಕ್ರ. ಸಂ. | ಹಾಲಿ ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡಂತೆ | | | | ತಿದ್ದುಪಡಿ ಮಾಡಿರುವಂತೆ | ಷರಾ |
|---|---|---|---|---|---|---|
| | ಮಾರ್ಗಸೂಚಿ ದರಪಟ್ಟಿ ಪುಟ ಸಂಖ್ಯೆ: | ವಿಷಯ | ತಪ್ಪಾಗಿ ಮುದ್ರಣವಾಗಿರುವುದು | | | |
| 1 | 1 | ಅಧಿಸೂಚನೆಯ ದಿನಾಂಕ | ಅಧಿಸೂಚನೆಯ ದಿನಾಂಕವನ್ನು 16/03/2016 ಎಂದು ಪ್ರಕಟಿಸಲಾಗಿದೆ. | ರ ಬದಲಿಗೆ | ಅಧಿಸೂಚನೆಯ ದಿನಾಂಕವನ್ನು 19/03/2016 ಎಂದು ಓದಿಕೊಳ್ಳುವುದು. | ಸರಿಪಡಿಸಲಾಗಿದೆ |

| ಕ್ರ. ಸಂ. | ಹಾಲಿ ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡಂತೆ | | | | ತಿದ್ದುಪಡಿ ಮಾಡಿರುವಂತೆ | ಷರಾ |
|---|---|---|---|---|---|---|
| | ಮಾರ್ಗಸೂಚಿ ದರಪಟ್ಟಿ ಪುಟ ಸಂಖ್ಯೆ: | ವಿಷಯ | ತಪ್ಪಾಗಿ ಮುದ್ರಣವಾಗಿರುವುದು | | | |
| 2 | 1 | ಉಲ್ಲೇಖ (3) ಚಿಂತಾಮಣಿ, ಉಪಸಮಿತಿ ನಡವಳಿ ದಿನಾಂಕ: 11/08/2015 | ದಿನಾಂಕ: 11/08/2015 ಕೈಬಿಟ್ಟು ಹೋಗಿರುವುದು. | ರ ಬದಲಿಗೆ | ಉಲ್ಲೇಖ (3) ಚಿಂತಾಮಣಿ, ಉಪಸಮಿತಿ ನಡವಳಿ ದಿನಾಂಕ: 11/08/2015 | ಸರಿಪಡಿಸಲಾಗಿದೆ |
| 3 | 2 | ಜಿಲ್ಲಾ ನೋಂದಣಾಧಿಕಾರಿಗಳ ಹೆಸರು ಮತ್ತು ಮೊಹರು. | ಕೈಬಿಟ್ಟು ಹೋಗಿರುವುದು. | ರ ಬದಲಿಗೆ | ಶಶಿಕಲ.ಬಿ.ಎನ್. ಜಿಲ್ಲಾ ನೋಂದಣಾಧಿಕಾರಿಗಳು ಮತ್ತು ಮುದ್ರಾಂಕಗಳ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಹಾಗೂ ಸದಸ್ಯರು ಕೇಂದ್ರ ಮೌಲ್ಯಮಾಪನ ಸಮಿತಿ. | ಸರಿಪಡಿಸಲಾಗಿದೆ |
| 4 | 25 | ಉ.ನೋ.ಕಛೇರಿ ಮಾರ್ಗಸೂಚಿ ದರಗಳ ಅಂತ್ಯದಲ್ಲಿ ಸಂಬಂಧಪಟ್ಟ ಉಪ ಸಮಿತಿ ಕಾರ್ಯದರ್ಶಿ ಹೆಸರು ಮತ್ತು ಮೊಹರು | ಕೈಬಿಟ್ಟು ಹೋಗಿರುವುದು. | ರ ಬದಲಿಗೆ | ಅಂಜಲಿ, ಉಪ ನೋಂದಣಾಧಿಕಾರಿಗಳು ಮತ್ತು ಸದಸ್ಯ ಕಾರ್ಯದರ್ಶಿ ತಾಲ್ಲೂಕು ಸ್ಥಿರಾಸ್ತಿಗಳ ಮೌಲ್ಯಮಾಪನ ಉಪ ಸಮಿತಿ, ಬಾಗೇಪಲ್ಲಿ. (ಶಶಿಕಲ.ಬಿ.ಎನ್) ಜಿಲ್ಲಾ ನೋಂದಣಾಧಿಕಾರಿಗಳು ಮತ್ತು ಮುದ್ರಾಂಕಗಳ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಹಾಗೂ ಸದಸ್ಯರು ಕೇಂದ್ರ ಮೌಲ್ಯಮಾಪನ ಸಮಿತಿ. | ಸರಿಪಡಿಸಲಾಗಿದೆ |
| 5 | 61 | ಉ.ನೋ.ಕಛೇರಿ ಮಾರ್ಗಸೂಚಿ ದರಗಳ ಅಂತ್ಯದಲ್ಲಿ ಸಂಬಂಧಪಟ್ಟ ಉಪ ಸಮಿತಿ ಕಾರ್ಯದರ್ಶಿ ಹೆಸರು ಮತ್ತು ಮೊಹರು | ಕೈಬಿಟ್ಟು ಹೋಗಿರುವುದು | ರ ಬದಲಿಗೆ | ಭೋಜರಾಜ, ಉಪ ನೋಂದಣಾಧಿಕಾರಿಗಳು ಮತ್ತು ಸದಸ್ಯ ಕಾರ್ಯದರ್ಶಿ ತಾಲ್ಲೂಕು ಸ್ಥಿರಾಸ್ತಿಗಳ ಮೌಲ್ಯಮಾಪನ ಉಪ ಸಮಿತಿ, ಚಿಕ್ಕಬಳ್ಳಾಪುರ. ಶಶಿಕಲ.ಬಿ.ಎನ್. ಜಿಲ್ಲಾ ನೋಂದಣಾಧಿಕಾರಿಗಳು ಮತ್ತು ಮುದ್ರಾಂಕಗಳ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಹಾಗೂ ಸದಸ್ಯರು ಕೇಂದ್ರ ಮೌಲ್ಯಮಾಪನ ಸಮಿತಿ. | ಸರಿಪಡಿಸಲಾಗಿದೆ |
| 6 | 88 | ಉ.ನೋ.ಕಛೇರಿ ಮಾರ್ಗಸೂಚಿ ದರಗಳ ಅಂತ್ಯದಲ್ಲಿ ಸಂಬಂಧಪಟ್ಟ ಉಪ ಸಮಿತಿ ಕಾರ್ಯದರ್ಶಿ ಹೆಸರು ಮತ್ತು ಮೊಹರು | ಕೈಬಿಟ್ಟು ಹೋಗಿರುವುದು | ರ ಬದಲಿಗೆ | ಹೆಚ್.ಪಿ.ಪ್ರಭಾಕರ ನಾಯಕ, ಉಪ ನೋಂದಣಾಧಿಕಾರಿಗಳು ಮತ್ತು ಸದಸ್ಯ ಕಾರ್ಯದರ್ಶಿ ತಾಲ್ಲೂಕು ಸ್ಥಿರಾಸ್ತಿಗಳ ಮೌಲ್ಯಮಾಪನ ಉಪ ಸಮಿತಿ, ಚಿಂತಾಮಣಿ.<br>ಶಶಿಕಲ.ಬಿ.ಎನ್. ಜಿಲ್ಲಾ ನೋಂದಣಾಧಿಕಾರಿಗಳು ಮತ್ತು ಮುದ್ರಾಂಕಗಳ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಹಾಗೂ ಸದಸ್ಯರು ಕೇಂದ್ರ ಮೌಲ್ಯಮಾಪನ ಸಮಿತಿ. | ಸರಿಪಡಿಸಲಾಗಿದೆ |
| 7 | 96 | ಉ.ನೋ.ಕಛೇರಿ ಮಾರ್ಗಸೂಚಿ ದರಗಳ ಅಂತ್ಯದಲ್ಲಿ ಸಂಬಂಧಪಟ್ಟ ಉಪ ಸಮಿತಿ ಕಾರ್ಯದರ್ಶಿ ಹೆಸರು ಮತ್ತು ಮೊಹರು | ಕೈಬಿಟ್ಟು ಹೋಗಿರುವುದು | ರ ಬದಲಿಗೆ | ಎಂ.ವಿ.ರಾಧಮ್ಮ, ಉಪ ನೋಂದಣಾಧಿಕಾರಿಗಳು ಮತ್ತು ಸದಸ್ಯ ಕಾರ್ಯದರ್ಶಿ ತಾಲ್ಲೂಕು ಸ್ಥಿರಾಸ್ತಿಗಳ ಮೌಲ್ಯಮಾಪನ ಉಪ ಸಮಿತಿ, ಗುಡಿಬಂಡೆ.<br>ಶಶಿಕಲ.ಬಿ.ಎನ್. ಜಿಲ್ಲಾ ನೋಂದಣಾಧಿಕಾರಿಗಳು ಮತ್ತು ಮುದ್ರಾಂಕಗಳ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಹಾಗೂ ಸದಸ್ಯರು ಕೇಂದ್ರ ಮೌಲ್ಯಮಾಪನ ಸಮಿತಿ. | ಸರಿಪಡಿಸಲಾಗಿದೆ |

| ಕ್ರ. ಸಂ. | ಹಾಲಿ ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡಂತೆ | | | | ತಿದ್ದುಪಡಿ ಮಾಡಿರುವಂತೆ | ಷರಾ |
|---|---|---|---|---|---|---|
| | ಮಾರ್ಗಸೂಚಿ ದರಪಟ್ಟಿ ಪುಟ ಸಂಖ್ಯೆ: | ವಿಷಯ | ತಪ್ಪಾಗಿ ಮುದ್ರಣವಾಗಿರುವುದು | | | |
| 8 | 129 | ಉ.ನೋ.ಕಛೇರಿ ಮಾರ್ಗಸೂಚಿ ದರಗಳ ಅಂತ್ಯದಲ್ಲಿ ಸಂಬಂಧಪಟ್ಟ ಉಪ ಸಮಿತಿ ಕಾರ್ಯದರ್ಶಿ ಹೆಸರು ಮತ್ತು ಮೊಹರು | ಕೈಬಿಟ್ಟು ಹೋಗಿರುವುದು | ರ ಬದಲಿಗೆ | ಎಂ.ಎನ್.ಶ್ರೀನಿವಾಸ, ಉಪ ನೋಂದಣಾಧಿಕಾರಿಗಳು ಮತ್ತು ಸದಸ್ಯ ಕಾರ್ಯದರ್ಶಿ ತಾಲ್ಲೂಕು ಸ್ಥಿರಾಸ್ತಿಗಳ ಮೌಲ್ಯಮಾಪನ ಉಪ ಸಮಿತಿ, ಶಿಡ್ಲಘಟ್ಟ<br>ಶಶಿಕಲ.ಬಿ.ಎನ್. ಜಿಲ್ಲಾ ನೋಂದಣಾಧಿಕಾರಿಗಳು ಮತ್ತು ಮುದ್ರಾಂಕಗಳ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಹಾಗೂ ಸದಸ್ಯರು ಕೇಂದ್ರ ಮೌಲ್ಯಮಾಪನ ಸಮಿತಿ. | ಸರಿಪಡಿಸಲಾಗಿದೆ |
| 9 | 163 | ಉ.ನೋ.ಕಛೇರಿ ಮಾರ್ಗಸೂಚಿ ದರಗಳ ಅಂತ್ಯದಲ್ಲಿ ಸಂಬಂಧಪಟ್ಟ ಉಪ ಸಮಿತಿ ಕಾರ್ಯದರ್ಶಿ ಹೆಸರು ಮತ್ತು ಮೊಹರು. | ಉ.ನೋ.ಕಛೇರಿ ಮಾರ್ಗಸೂಚಿ ದರಗಳ ಅಂತ್ಯದಲ್ಲಿ ಸಂಬಂಧಪಟ್ಟ ಉಪ ಸಮಿತಿ ಕಾರ್ಯದರ್ಶಿ ಹೆಸರು ಮತ್ತು ಮೊಹರು ಇರುವುದಿಲ್ಲ. | ರ ಬದಲಿಗೆ | ವೈ.ಎನ್.ಪ್ರಸನ್ನ ಕುಮಾರ, ಉಪ ನೋಂದಣಾಧಿಕಾರಿಗಳು ಮತ್ತು ಸದಸ್ಯ ಕಾರ್ಯದರ್ಶಿ ತಾಲ್ಲೂಕು ಸ್ಥಿರಾಸ್ತಿಗಳ ಮೌಲ್ಯಮಾಪನ ಉಪ ಸಮಿತಿ, ಗೌರಿಬಿದನೂರು.<br>ಶಶಿಕಲ.ಬಿ.ಎನ್. ಜಿಲ್ಲಾ ನೋಂದಣಾಧಿಕಾರಿಗಳು ಮತ್ತು ಮುದ್ರಾಂಕಗಳ ಉಪ ಆಯುಕ್ತರು, ಚಿಕ್ಕಬಳ್ಳಾಪುರ ಹಾಗೂ ಸದಸ್ಯರು ಕೇಂದ್ರ ಮೌಲ್ಯಮಾಪನ ಸಮಿತಿ. | ಸರಿಪಡಿಸಲಾಗಿದೆ |

**ಶಶಿಕಲ ಬಿ.ಎನ್.**
ಜಿಲ್ಲಾ ನೋಂದಣಾಧಿಕಾರಿಗಳು ಮತ್ತು ಮುದ್ರಾಂಕಗಳ
ಉಪ ಆಯುಕ್ತರು, ಚಿಕ್ಕಬಳ್ಳಾಪುರ ಹಾಗೂ ಸದಸ್ಯರು
ಕೇಂದ್ರ ಮೌಲ್ಯಮಾಪನ ಸಮಿತಿ.

| ಜಿಲ್ಲಾಧಿಕಾರಿಗಳ ಅಂತಿಮ ಅಧಿಸೂಚನೆಯಂತೆ ಗ್ರಾಮ ಪಂಚಾಯಿತಿ ವ್ಯಾಪ್ತಿಯ ಗ್ರಾಮ ಸಮೂಹಗಳ ವಿವರ | | ಈ ಪ್ರಾಧಿಕಾರದ ದಿ: 30–3–2015ರ ಆದೇಶದಂತೆ ಜಿಲ್ಲಾಧಿಕಾರಿಗಳ ಅಂತಿಮ ಅಧಿಸೂಚನೆಯಲ್ಲಿ ಆಗಿರುವ ಬದಲಾವಣೆ | | ಈ ಪ್ರಾಧಿಕಾರದ ದಿ: 24–8–2016ರ ಆದೇಶದಂತೆ ಜಿಲ್ಲಾಧಿಕಾರಿಗಳ ಅಂತಿಮ ಅಧಿಸೂಚನೆಯಲ್ಲಿ ಆಗಿರುವ ಬದಲಾವಣೆ | |
|---|---|---|---|---|---|
| ಗ್ರಾಮ ಪಂಚಾಯಿತಿ ಹೆಸರು | ಗ್ರಾಮ ಪಂಚಾಯಿತಿಗೆ ಒಳಪಡುವ ಗ್ರಾಮಗಳು | ಗ್ರಾಮ ಪಂಚಾಯಿತಿ ಹೆಸರು | ಗ್ರಾಮ ಪಂಚಾಯಿತಿಗೆ ಒಳಪಡುವ ಗ್ರಾಮಗಳು | ಗ್ರಾಮ ಪಂಚಾಯಿತಿ ಹೆಸರು | ಗ್ರಾಮ ಪಂಚಾಯಿತಿಗೆ ಒಳಪಡುವ ಗ್ರಾಮಗಳು |
| ಬೆಟ್ಟಹಲಸೂರು | ಬೆಟ್ಟಹಲಸೂರು | ಬೆಟ್ಟಹಲಸೂರು | ಬೆಟ್ಟಹಲಸೂರು | ಬೆಟ್ಟಹಲಸೂರು | ಬೆಟ್ಟಹಲಸೂರು |
| | ಕುದುರೆಗೆರೆ | | ಕುದುರೆಗೆರೆ | | ಕುದುರೆಗೆರೆ |
| | ತರಹುಣಸೆ | | ತರಹುಣಸೆ | | ತರಹುಣಸೆ |
| | ತಿಮ್ಮಸಂದ್ರ | | ತಿಮ್ಮಸಂದ್ರ | | ತಿಮ್ಮಸಂದ್ರ |
| | ನೆಲ್ಲುಕುಂಟೆ | | ನೆಲ್ಲುಕುಂಟೆ | | ನೆಲ್ಲುಕುಂಟೆ |
| | ಪಾಪನಹಳ್ಳಿ | | ಪಾಪನಹಳ್ಳಿ | | ಪಾಪನಹಳ್ಳಿ |
| | ಗಡೇನಹಳ್ಳಿ | | ಗಡೇನಹಳ್ಳಿ | | ಗಡೇನಹಳ್ಳಿ |
| | | | ಸುಗ್ಗಟ್ಟ | | ಸುಗ್ಗಟ್ಟ |
| ಬಾಗಲೂರು | ಬಾಗಲೂರು | ಬಾಗಲೂರು | ಬಾಗಲೂರು | ಬಾಗಲೂರು | ಬಾಗಲೂರು |
| | ರಜಾಕ್‌ಸಾಬ್ ಪಾಳ್ಯ | | ಮಸ್ತಾನ್‌ಸಾಬ್ ಪಾಳ್ಯ | | ರಜಾಕ್‌ಸಾಬ್ ಪಾಳ್ಯ |
| | ಮಸ್ತಾನ್‌ಸಾಬ್ ಪಾಳ್ಯ | | | | ಮಸ್ತಾನ್‌ಸಾಬ್ ಪಾಳ್ಯ |

Jayanthi

ಪ್ರಾದೇಶಿಕ ಆಯುಕ್ತರು,
ಬೆಂಗಳೂರು ವಿಭಾಗ,
ಬೆಂಗಳೂರು.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 25

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–*IVA* | ಬೆಂಗಳೂರು, ಶುಕ್ರವಾರ, ಆಗಸ್ಟ್ ೫, ೨೦೧೬ (ಶ್ರಾವಣ ೧೪, ಶಕ ವರ್ಷ ೧೯೩೮) | ನಂ. ೯೯೧ |
|---|---|---|
| *Part–IVA* | *Bengaluru, Friday, August 5, 2016 (Shravana 14, Shaka Varsha 1938)* | *No. 991* |


## ಅಲ್ಪಸಂಖ್ಯಾತರ ಕಲ್ಯಾಣ, ಹಜ್ ಮತ್ತು ವಕ್ಫ್ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: MWD 93 WES 2016, ಬೆಂಗಳೂರು, ದಿನಾಂಕ: 02–08–2016.**

ವಕ್ಫ್ ಕಾಯಿದೆ, 1995ರಡಿಯಲ್ಲಿ ರಚಿಸಲಾಗಿರುವ ಕರ್ನಾಟಕ ರಾಜ್ಯ ವಕ್ಫ್ ನಿಯಮಗಳು, 1997ನ್ನು ವಕ್ಫ್ ತಿದ್ದುಪಡಿ ಕಾಯಿದೆ, 2013ಕ್ಕೆ ಅನುಗುಣವಾಗಿ ಹೊಸದಾಗಿ ನಿಯಮಗಳನ್ನು ರಚಿಸಲು ಸರ್ಕಾರದ ಆದೇಶ ಸಂಖ್ಯೆ: ಎಂಡಬ್ಲ್ಯೂಡಿ 106 ಎಂಡಬ್ಲ್ಯೂಇಎಸ್ 2014, ದಿನಾಂಕ: 07.07.2014ರಂದು ರಚಿಸಲಾಗಿದ್ದು, ಸಲಹಾ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿ, ಈ ಕೆಳಕಂಡಂತೆ ಸಲಹಾ ಸಮಿತಿಯನ್ನು ಪುನರ್ ರಚಿಸಿ ಆದೇಶಿಸಿದೆ.

| ಕ್ರ. ಸಂ. | ಹೆಸರು | ಸ್ಥಾನ |
|---|---|---|
| 01 | **ಶ್ರೀ ತನ್ವೀರ್ ಸೇಠ್**, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ, ಅಲ್ಪಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರು | ಅಧ್ಯಕ್ಷರು |
| 02 | **ಶ್ರೀ ಕೆ. ಅಬ್ದುಲ್ ಜಬ್ಬಾರ್**, ಮಾನ್ಯ ವಿಧಾನ ಪರಿಷತ್ ಸದಸ್ಯರು | ಸದಸ್ಯರು |
| 03 | **ಶ್ರೀ ರಿಯಾಜ್ ಅಹಮದ್ ಖಾನ್**, ಕರ್ನಾಟಕ ರಾಜ್ಯ ವಕ್ಫ್ ಮಂಡಳಿ ಸದಸ್ಯರು | ಸದಸ್ಯರು |
| 04 | **ಶ್ರೀ ತಹಸೀನ್ ಅಹ್ಮದ್**, ನಿವೃತ್ತ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಕರ್ನಾಟಕ ರಾಜ್ಯ ವಕ್ಫ್ ಮಂಡಳಿ, ಬೆಂಗಳೂರು | ಸದಸ್ಯರು |
| 05 | **ಶ್ರೀ ಮಾಜ್ ಅಹಮದ್ ಶರೀಫ್**, ನಿವೃತ್ತ ಕೆ.ಎ.ಎಸ್. ಅಧಿಕಾರಿ | ಸದಸ್ಯರು |
| 06 | **ಶ್ರೀ ನೂರ್ ಇಬ್ರಾಹಿಂ**, ವಕೀಲರು, ಮೈಸೂರು | ಸದಸ್ಯರು |
| 07 | **ಶ್ರೀ ಕಮಾಲ್,** ವಕೀಲರು, ಕನ್ನಿಂಗ್‌ಹ್ಯಾಂ ರಸ್ತೆ, ಬೆಂಗಳೂರು | ಸದಸ್ಯರು |
| 08 | ಸರ್ಕಾರದ ಕಾರ್ಯದರ್ಶಿ, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಅಕ್ರಂಭಾಷ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಅಲ್ಪಸಂಖ್ಯಾತರ ಕಲ್ಯಾಣ,
ಹಜ್ ಮತ್ತು ವಕ್ಫ್ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು ೨೦೦

*RNI No. KARBIL/2001/47147*

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–*IVA* | ಬೆಂಗಳೂರು, ಶುಕ್ರವಾರ, ಆಗಸ್ಟ್ ೫, ೨೦೧೬ (ಶ್ರಾವಣ ೧೪, ಶಕ ವರ್ಷ ೧೯೩೮) | ನಂ. ೯೯೨ |
|---|---|---|
| ***Part–IVA*** | ***Bengaluru, Friday, August 5, 2016 (Shravana 14, Shaka Varsha 1938)*** | ***No. 992*** |


**MINORITY WELFARE, HAJ & WAQF SECRETARIAT**

**NOTIFICATION**

**No. MWD 114 WES 2016, Bengaluru, Dated: 29-07-2016.**

Sri Tanveer Sait S/o Late Azez Sait was nominated as Member of Karnataka State Board of Wakf, Bengaluru vide Government Notification No. MWD 237 WES 2011 dated: 28.08.2011. Subsequently, he has been inducted in the Council of Minister's and he assumed charge of the Minister for Primary & Secondary Education, Minority Welfare and Wakf Department on 19.06.2016. Hence, his Membership as Member of the Karnataka State Board of Wakf, Bengaluru ceases with immediate effect.

By Order & in the name of the Governor of Karnataka

**AKRAM BHASHA**
Under Secretary to Government (I/c)
Minority Welfare, Haj & Waqf Department

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 200

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ


| ಭಾಗ-IVA | ಬೆಂಗಳೂರು, ಶನಿವಾರ, ಆಗಸ್ಟ್ ೬, ೨೦೧೬ (ಶ್ರಾವಣ ೧೫, ಶಕ ವರ್ಷ ೧೯೩೮) | ನಂ. ೯೯೩ |
|---|---|---|
| *Part-IVA* | *Bengaluru, Saturday, August 6, 2016 (Shravana 15, Shaka Varsha 1938)* | *No. 993* |


ಕಾರ್ಮಿಕ ಸಚಿವಾಲಯ

ಅಧಿಸೂಚನೆ

**ಸಂಖ್ಯೆ: ಕಾಇ 82 ಎಲ್‌ಡಬ್ಲ್ಯೂಎ 2015, ಬೆಂಗಳೂರು, ದಿನಾಂಕ: 04-8-2016.**

ಕರ್ನಾಟಕ ರಾಜ್ಯಾದ್ಯಂತ "ಖಾಸಗಿ ಸಫಾಯಿ ಕರ್ಮಚಾರಿ" (ಯಂತ್ರಗಳ ಸಹಾಯದಿಂದ ಮಾತ್ರ ಶುಚಿತ್ವಗೊಳಿಸುವ) ಉದ್ದಿಮೆಗಳಲ್ಲಿ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರದ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯಪತ್ರದ ಭಾಗ-4ಎ ರಲ್ಲಿ ದಿ:17-09-2015ರಂದು ಪ್ರಕಟಿಸಿ, 1948ರ ಕನಿಷ್ಠ ವೇತನ ಕಾಯ್ದೆಯ (ಕೇಂದ್ರದ ಕಾಯ್ದೆಯ ಸಂಖ್ಯೆ: XI) ಕಲಂ 5ರ ಉಪಕಲಂ 1ರ(ಬಿ) ಖಂಡದ ಮೇರೆಗೆ ಭಾಧಿತರಾಗುವ/ಸಂಬಂಧವಿರುವ ವ್ಯಕ್ತಿಗಳ ಗಮನಕ್ಕೆ ತರಲಾಗಿದ್ದು, ಅವರಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲು ಎರಡು ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಸ್ವೀಕೃತಗೊಂಡ ಸಲಹೆ/ಆಕ್ಷೇಪಣೆಗಳು ಮತ್ತು ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸದರಿ ಮಂಡಳಿಯಲ್ಲಿ ಸರ್ಕಾರದ ಪ್ರಸ್ತಾವನೆಯನ್ನು ಸುಧೀರ್ಘವಾಗಿ ಸಮಾಲೋಚಿಸಿ, ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಶಿಫಾರಸ್ಸನ್ನು ಗಣನೆಗೆ ತೆಗೆದುಕೊಂಡು, 1948ರ ಕನಿಷ್ಠ ವೇತನ ಕಾಯ್ದೆಯ (ಕೇಂದ್ರದ ನಿಯಮ ಸಂಖ್ಯೆ: XI) ಕಲಂ 3ರ ಉಪಕಲಂ (1)ರ (ಬಿ) ಖಂಡ ಹಾಗೂ ಕಲಂ 5ರ ಉಪಕಲಂ (1)ನೇ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ,ಕರ್ನಾಟಕ ರಾಜ್ಯಾದ್ಯಾಂತ **"ಖಾಸಗಿ ಸಫಾಯಿ ಕರ್ಮಚಾರಿ (ಯಂತ್ರಗಳ ಸಹಾಯದಿಂದ ಮಾತ್ರ ಶುಚಿತ್ವಗೊಳಿಸುವ)"** ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಅನ್ವಯವಾಗುವಂತೆ ಕನಿಷ್ಠ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿ ಇರುವಂತೆ ಪರಿಷ್ಕರಿಸಲಾಗಿದೆ.

ಅನುಸೂಚಿ

| ಕ್ರ. ಸಂ | ಕೆಲಸದ ವರ್ಗೀಕರಣ | ಕನಿಷ್ಠ ವೇತನ ದರಗಳು | | | |
|---|---|---|---|---|---|
| | | | ವಲಯ-1 | ವಲಯ-2 | ವಲಯ-3 |
| 1. | **ಯಂತ್ರಗಳ ಸಹಾಯದಿಂದ ಮಾತ್ರ ಶುಚಿತ್ವಗೊಳಿಸುವುದನ್ನು ಒಳಗೊಂಡಂತೆ ಹಾಗೂ** ಒಳಚರಂಡಿ, ಸ್ನಾನಗೃಹ ಮತ್ತು ಶೌಚಾಲಯಗಳನ್ನು ಸ್ವಚ್ಛಗೊಳಿಸುವ ಹಾಗೂ ಅದೇ ರೀತಿಯ ಕೆಲಸಗಳಲ್ಲಿ ನಿರತರಾಗಿರುವ ಎಲ್ಲಾ ಖಾಸಗಿ ಸಫಾಯಿ ಕರ್ಮಚಾರಿಗಳು | ದಿನಕ್ಕೆ | 540-00 | 525-00 | 490-00 |
| | | ತಿಂಗಳಿಗೆ | 14,040-00 | 13,650-00 | 12,740-00 |
| | | **ಕ್ರಮ ಸಂಖ್ಯೆ:1ರಡಿ ತಿಳಿಸಲಾಗಿರುವ ಕನಿಷ್ಠ ವೇತನ ದರಗಳು ವಲಯ-1ರ ಮೂಲವೇತನ ರೂ. 10,010/- ವಲಯ-2ರ ಮೂಲವೇತನ ರೂ. 9,750/- ವಲಯ-3ರ ಮೂಲವೇತನ ರೂ. 9,100/-ಗಳಿಗೆ ಆರೋಗ್ಯ ಹಾನಿಕಾರಕ ಭತ್ಯೆ, ಆಪತ್ತು ಭತ್ಯೆ , ಶುಚಿತ್ವ ಭತ್ಯೆಗಳನ್ನು ಸೇರಿಸಲ್ಪಟ್ಟ ಮೊತ್ತವಾಗಿರುತ್ತದೆ.** | | | |

**ತುಟ್ಟಿಭತ್ಯೆ:–**

ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 5780 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿಭತ್ಯೆ ನೀಡತಕ್ಕದ್ದು.

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2015 ರಿಂದ ಡಿಸೆಂಬರ್ 2015)ರ ಸರಾಸರಿ ಆಧಾರದ ಮೇಲೆ 2016 ಏಪ್ರಿಲ್ 1 ನೇ ತಾರೀಖಿನಿಂದ ಜಾರಿಗೆ ಬರುತ್ತದೆ.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:–

**ಅ) ಮಾಸಿಕ ವೇತನವನ್ನು ಪಡೆಯುವವರು:–** ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತಿಂಗಳ ತುಟ್ಟಿಭತ್ಯೆ

**ಆ) ದಿನಗೂಲಿ ವೇತನ ಪಡೆಯುವವರು :–**

$$\frac{\text{ಪ್ರತಿ ವರ್ಷ ಹೆಚ್ಚಾಗುವ ಅಂಶಗಳು} \times \text{ತುಟ್ಟಿಭತ್ಯೆಯ ದರ} \times 30}{26} = \text{ದಿನದ ತುಟ್ಟಿಭತ್ಯೆ}$$

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು.
3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ವೇತನ ದರಗಳನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.
4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.
5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ದಿನಗಳಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.
7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.
8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.
9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.
10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.
11. ಈ ಅಧಿಸೂಚನೆಯಲ್ಲಿ ನಿಗಧಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.
12. ನೌಕರರುಗಳಿಗೆ ಕೆಲಸ ಮಾಡಲು ಈ ಕೆಳಕಂಡ ವಸ್ತುಗಳು, ಸುರಕ್ಷತಾ ಸಾಮಾಗ್ರಿಗಳು ಮತ್ತು ಸೌಲಭ್ಯಗಳನ್ನು ಗುತ್ತಿಗೆದಾರರು ಒದಗಿಸತಕ್ಕದ್ದು, ತಪ್ಪಿದಲ್ಲಿ ಪ್ರಧಾನ ಮಾಲೀಕರು ಒದಗಿಸಬೇಕಿರುತ್ತದೆ.
    1) ವಿಶ್ರಾಂತಿ ಗೃಹ (rest rooms)
    2) ಕುಡಿಯುವ ನೀರಿನ ವ್ಯವಸ್ಥೆ (drinking water facilities)

3) ಶೌಚಾಲಯದ ವ್ಯವಸ್ಥೆ (toilets)
4) ಪ್ರಥಮ ಚಿಕಿತ್ಸಾ ಸೌಲಭ್ಯಗಳು (first aid facilities)
5) ಶುಚಿತ್ವ ಸೌಲಭ್ಯಗಳು (washing facilities)
6) ಸಮವಸ್ತ್ರ (uniforms)
7) ಹ್ಯಾಂಡ್‌ಗ್ಲೋವ್ಸ್ (hand gloves-leather)
8) ಟೋಪಿ (caps)
9) ರಬ್ಬರಿನ ಬೂಟುಗಳು (gumboots with ISI mark)
10) ಚಪ್ಪಲಿಗಳು (slippers)
11) ಶುಚಿಗೊಳಿಸುವ ಸಾಧನಗಳು ಹಾಗೂ ಉಪಕರಣಗಳು
12) ಕಸಬರಿಕೆ (long handle broom, broomstick with wiring)
13) ತುರಿಮಣೆ (drain scrappers – 18" gauge 6" x 9" , collection plate, hand scrappers 16 gauge iron sheet 9" x 4" bended )
14) ಕಳೆ ಗುದ್ದಲಿ (hoe with wooden handle weighing 14kg)
15) ಸಲಿಕೆ (spade)
16) ಮಾಸ್ಕ್ (nose mask- dust free respirator)
17) ಗಮೇಲ (ghamela)
18) ಕಳೆ ತಗೆಯುವ ಯಂತ್ರ (weed cutting machine)
19) ಚರಂಡಿ ಶುಚಿಗೊಳಿಸುವ ಸಾಧನಗಳು (draincleaning equipments)
20) ಬಿದಿರಿನ ಬುಟ್ಟಿಗಳು (bamboo baskets 20" dia , 11" dip)
21)ಹೊರೆಬಂಡಿ (push carts)
22)ಫಿನೈಲ್ ಮತ್ತು ಬ್ಲೀಚಿಂಗ್ ಪೌಡರ್

13. ನೌಕರರುಗಳ ವೇತನವನ್ನು ಚೆಕ್ ಮೂಲಕ ಪಾವತಿಸುವುದು ಅಥವಾ ನೌಕರರ ಬ್ಯಾಂಕ್ ಖಾತೆಗೆ ನೇರವಾಗಿ ಜಮೆ ಮಾಡತಕ್ಕದ್ದು.

**ವಲಯ–1** : ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಹಾಗೂ ರಾಜ್ಯದ ಎಲ್ಲಾ ಮಹಾನಗರಪಾಲಿಕೆಗಳು ಮತ್ತು ಇವುಗಳಿಗೆ ಗೊತ್ತುಪಡಿಸಿದ ಆಗ್ಲೋಮರೇಷನ್ ಪ್ರದೇಶಗಳು

**ವಲಯ–2** : ವಲಯ 1 ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ, ರಾಜ್ಯದ ಜಿಲ್ಲಾ ಕೇಂದ್ರಗಳು.

**ವಲಯ–3** : ವಲಯ–1 ಮತ್ತು 2 ರಲ್ಲಿ ನಮೂದಿಸಿರುವ ಪ್ರದೇಶಗಳನ್ನು ಹೊರತುಪಡಿಸಿ ರಾಜ್ಯದ ಇತರೆ ಭಾಗಗಳು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎ.ಎನ್. ರಾಧಾಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು ೨೦೦

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

## ವಿಶೇಷ ರಾಜ್ಯ ಪತ್ರಿಕೆ

| ಭಾಗ–IVA | ಬೆಂಗಳೂರು, ಶನಿವಾರ, ಆಗಸ್ಟ್ ೬, ೨೦೧೬ (ಶ್ರಾವಣ ೧೫, ಶಕ ವರ್ಷ ೧೯೩೮) | ನಂ. ೯೯೪ |
|---|---|---|
| Part–IVA | Bengaluru, Saturday, August 6, 2016 (Shravana 15, Shaka Varsha 1938) | No. 994 |


### ಕಾರ್ಮಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಕಾಇ 81 ಎಲ್‌ಡಬ್ಲ್ಯೂಎ 2015, ಬೆಂಗಳೂರು, ದಿನಾಂಕ: 04–08–2016.**

ಕರ್ನಾಟಕ ರಾಜ್ಯಾದ್ಯಂತ **"ಮೀನು ಹಿಡಿಯುವುದು, ಮೀನು ಕ್ಯೂರಿಂಗ್, ಮೀನು ಪೀಲಿಂಗ್, ಕಪ್ಪೆ ಕಾಲು ರಫ್ತು ಮಾಡುವುದು"** ಉದ್ದಿಮೆಗಳಲ್ಲಿ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಈ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರದ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯಪತ್ರದ ಭಾಗ–4ಎ ರಲ್ಲಿ ದಿನಾಂಕ:30–07–2015 ರಂದು ಪ್ರಕಟಿಸಿ, 1948ರ ಕನಿಷ್ಠ ವೇತನ ಕಾಯ್ದೆಯ (ಕೇಂದ್ರದ ಕಾಯ್ದೆ ಸಂಖ್ಯೆ: XI) ಕಲಂ 5ರ ಉಪಕಲಂ 1ರ (ಬಿ) ಖಂಡದ ಮೇರೆಗೆ ಬಾಧಿತರಾಗುವ / ಸಂಬಂಧವಿರುವ ವ್ಯಕ್ತಿಗಳ ಗಮನಕ್ಕೆ ತರಲಾಗಿದ್ದು, ಅವರಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲು ಎರಡು ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಅವರಿಂದ ಯಾವುದೇ ಸಲಹೆ / ಆಕ್ಷೇಪಣೆಗಳು ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ನಂತರ, ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸದರಿ ಮಂಡಳಿಯಲ್ಲಿ ಸರ್ಕಾರದ ಪ್ರಸ್ತಾವನೆಯನ್ನು ಸುಧೀರ್ಘವಾಗಿ ಸಮಾಲೋಚಿಸಿ ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಶಿಫಾರಸ್ಸನ್ನು ಗಣನೆಗೆ ತೆಗೆದುಕೊಂಡು, 1948ರ ಕನಿಷ್ಠ ವೇತನ ಕಾಯ್ದೆಯ (ಕೇಂದ್ರ ನಿಯಮ ಸಂಖ್ಯೆ: XI) ಕಲಂ 3ರ ಉಪಕಲಂ (1)ರ (ಬಿ) ಖಂಡ ಹಾಗೂ ಕಲಂ 5ರ ಉಪಕಲಂ (1)ನೇ (ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ ಕರ್ನಾಟಕ ರಾಜ್ಯಾದ್ಯಂತ **"ಮೀನು ಹಿಡಿಯುವುದು, ಮೀನು ಕ್ಯೂರಿಂಗ್, ಮೀನು ಪೀಲಿಂಗ್, ಕಪ್ಪೆ ಕಾಲು ರಫ್ತು ಮಾಡುವುದು"** ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಅನ್ವಯವಾಗುವಂತೆ ಕನಿಷ್ಠ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿರುವಂತೆ ಪರಿಷ್ಕರಿಸಲಾಗಿದೆ.

**ಅನುಸೂಚಿ**

| ಕ್ರ. ಸಂ. | ಕೆಲಸದ ವಿವರಗಳು | ಕನಿಷ್ಠ ವೇತನ ದರಗಳು | |
|---|---|---|---|
| | | ದಿನಕ್ಕೆ | ತಿಂಗಳಿಗೆ |
| 1. | ಪ್ರಾಜೆಕ್ಟ್‌ಆಫೀಸರ್, ಪ್ಲಾಂಟ್‌ಇನ್‌ಚಾರ್ಜ್,ಮಾರ್ಕೆಟಿಂಗ್‌ಆಫೀಸರ್,ಫೀಲ್ಡ್‌ಆಫೀಸರ್,ಇಂಜಿನೀಯರ್ | 525.00 | 13,650.00 |
| 2. | ಕೋಲ್ಡ್ ಸ್ಟೋರೇಜ್ ಸೂಪರ್ ವೈಸರ್/ಪ್ರೊಸೆಸಿಂಗ್ ಸೂಪರ್ ವೈಸರ್/ಪ್ರೊಡಕ್ಷನ್ ಸೂಪರ್ ವೈಸರ್ ಮತ್ತು ಇತರೆ ಸೂಪರ್‌ವೈಸರ್‌ಗಳು | 520.00 | 13,520.00 |
| 3. | ಕೆಮಿಸ್ಟ್/ಟೆಕ್ನೀಷಿಯನ್‌ಕಮ್ ಸೂಪರ್‌ವೈಸರ್, ಆಪರೇಟರ್, ಮೇಷಿನ್ ಆಪರೇಟರ್, ಪ್ರೊಸಸ್ ವರ್ಕರ್, ಕ್ಯೂರಿಂಗ್ ಆಪರೇಟರ್ ಗ್ರೇಡಿಂಗ್, ಹೆವಿಡ್ಯೂಟಿ ಡ್ರೈವರ್, ಎಲೆಕ್ಟ್ರೀಷಿಯನ್, ಕಾರ್ಪೆಂಟರ್, ಮೆಕ್ಯಾನಿಕ್, ಬಾಯ್ಲರ್ ಆಪರೇಟರ್, ರೆಫ್ರಿಜರೇಟರ್ ಮೆಕ್ಯಾನಿಕ್, ಡ್ರೈವರ್, ಟೆಲಿಫೋನ್, ಆಪರೇಟರ್, ಯಾಂತ್ರಿಕ ದೋಣಿಗಳಲ್ಲಿ ಮೀನು | 490.00 | 12,740.00 |

| | | | |
|---|---|---|---|
| | ಹಿಡಿಯುವ ಕಾರ್ಮಿಕರು, ನಾಡ ದೋಣಿಗಳಲ್ಲಿ ಹೋಗಿ ಬಲೆಯೊಂದಿಗೆ ಮೀನುಗಳನ್ನು ಹಿಡಿಯುವವರು. | | |
| **4.** | ಲ್ಯಾಬೋರೇಟರಿ ಸಹಾಯಕ, ಪ್ರೊಕ್ಯೂರ್‌ಮೆಂಟ್ ಸಹಾಯಕ, ನೀರು ಶೇಖರಣೆಗೆ ಅಚ್ಚು ನಿರ್ಮಿಸುವುದು, ಸೀಗಡಿ/ಮೀನು ಮರಿಗಳ ಉತ್ಪಾದನೆಯ ಸಹಾಯಕರು, ಮೀನು ಮರಿಗಳನ್ನು ಸಾಗಿಸುವ ಮತ್ತು ಕೆರೆಗಳಲ್ಲಿ ಬಿಡುವ ಕೆಲಸಗಾರರು, ಬಲೆಗಳನ್ನು ಸೆಳೆಯುವವರು, ಬೋಟ್‌ಡ್ರೈವರ್, ಲೈಟ್ ಬೋಟ್‌ಡ್ರೈವರ್. | **475.00** | **12,350.00** |
| **5.** | ಐಸ್‌ಡಂಪರ್/ಡಂಪರ್, ದೋಣಿಗಳಿಂದ ಇಳಿಸುವವರು, ಮಾರುಕಟ್ಟೆಗೆ ಸಾಗಿಸುವವರು, ಮಾರಾಟಗಾರರು, ಯಂತ್ರೀಕೃತ ದೋಣಿಗಳನ್ನು ನೀರಿನ ಮಟ್ಟಕ್ಕೆಒಯ್ಯುವ ಮತ್ತು ನೀರಿನಿಂದ ಮೇಲಕ್ಕೆ ತರುವ ಕಾರ್ಮಿಕರು, ಡೆಕ್ ಲೋಡರ್, ಡೆಕ್‌ಅನ್ ಲೋಡರ್, ಮೀನುಗಳನ್ನು ಕತ್ತರಿಸುವವರು, ಸಿಪ್ಪೆ ತೆಗೆಯುವವರು ಮತ್ತು ಸ್ವಚ್ಛಗೊಳಿಸುವವರು, ಐಸ್ ಪುಡಿ ಮಾಡುವವರು. | **455.00** | **11,830.00** |
| **6.** | ಮೀನುಗಳಿಗೆ ಐಸ್ ಮತ್ತು ಉಪ್ಪು ಬೆರೆಸುವವರು, ಮೀನುಗಳನ್ನು ಒಣಗಿಸುವುದು ಮತ್ತು ಕಾವಲು ಕಾಯುವವ, ಮರಿಗಳನ್ನು ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ಸಾಗಿಸುವವರು, ಗೊಬ್ಬರ ಆಹಾರ ಹಾಕುವವರು, ಸೀಗಡಿ ಮೀನುಗಳನ್ನು ಹಿಡಿಯುವವರು [ನದಿ, ಕೆರೆ ಮತ್ತು ಕೊಳಗಳಲ್ಲಿ] ಮೀನುಗಳನ್ನು ಸಾಗಿಸುವವರು, ವಾಚ್‌ಮನ್, ಅಟೆಂಡರ್, ವೆಹಿಕಲ್‌ಕ್ಲೀನರ್, ಶುಚಿ ಮಾಡುವವರು, ಮಜ್ದೂರ್ [ವರ್ಕಿಂಗ್‌ಆನ್ ಲ್ಯಾಂಡರ್] ಸ್ಕಾವೆಂಜರ್ | **455.00** | **11,830.00** |
| | **ಪ್ರತಿ ದಿನಕ್ಕೆ** | | |
| **7.** | ಉಪ್ಪು ನೀರು ಸಿಗಡಿ ಕೃಷಿಯಲ್ಲಿ ನೇಮಿಸಿಕೊಂಡಿರುವ ಕಾರ್ಮಿಕರು | **450.00** | |
| **8.** | ಸಸಿಕಳೆ ಕೀಳುವವರು | **375.00** | |
| **9.** | **ಪೀಲಿಂಗ್ ಮತ್ತು ವೀನಿಂಗ್ ವಿಭಾಗದಲ್ಲಿ ತೊಡಗಿರುವ ಕೆಲಸಗಾರರಿಗೆ** | | |
| ಅ | ದೊಡ್ಡಗಾತ್ರದ್ದು | **450.00** | |
| ಆ | ಚಿಕ್ಕಗಾತ್ರದ್ದು | | |
| ಇ | ಬೀ ಹೆಡ್ಡಿಂಗ್ | | |
| **10.** | **ಕಪ್ಪೆಗಳ ಕಾಲುಗಳು** | | |
| ಅ | ಜಂಬೋ | **450.00** | |
| ಆ | ದೊಡ್ಡಗಾತ್ರದ್ದು | | |
| ಇ | ಮಧ್ಯಗಾತ್ರದ್ದು | | |
| ಈ | ಸಣ್ಣಗಾತ್ರದ್ದು | | |
| **11.** | **ಕಛೇರಿ ಸಿಬ್ಬಂದಿ** | ದಿನಕ್ಕೆ | ತಿಂಗಳಿಗೆ |
| 1. | ಮ್ಯಾನೇಜರ್/ ಪರ್ಸನಲ್‌ಆಫೀಸರ್ | **520.00** | **13,520.00** |
| 2. | ಅಸಿಸ್ಟೆಂಟ್ ಮ್ಯಾನೇಜರ್/ಅಸಿಸ್ಟೆಂಟ್ ಪರ್ಸನಲ್ ಮ್ಯಾನೇಜರ್ | **490.00** | **12,740.00** |
| 3. | ಅಕೌಂಟೆಂಟ್/ಪ್ರಥಮದರ್ಜೆ ಸಹಾಯಕ/ಪದವೀಧರ ಸಹಾಯಕ/ ಕ್ಯಾಷಿಯರ್/ಶೀಘ್ರಲಿಪಿಗಾರ/ಕಂಪ್ಯೂಟರ್‌ಆಪರೇಟರ್/ಸ್ಟೋರ್‌ಕೀಪರ್/ ಗುಮಾಸ್ತ/ಕ್ಲರ್ಕ | **385.00** | **10,010.00** |
| 4 | ಬೆರಳಚ್ಚುಗಾರ/ಡಾಟಾಎಂಟ್ರೀಆಪರೇಟರ್ | **380.00** | **9,880.00** |
| 5. | ಆಫೀಸ್‌ಬಾಯ್/ಪ್ಯೂನ್/ವಾಚಮನ್/ ಅಟೆಂಡರ್/ಸ್ವೀಪರ್ | **375.00** | **9,750.00** |

**ತುಟ್ಟಿಭತ್ಯೆ:–**

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2015 ರಿಂದ ಡಿಸೆಂಬರ್ 2015) ಸರಾಸರಿ ಆಧಾರದ ಮೇಲೆ 2016ರ ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ. ಅಂದರೆ, ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ

6205 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ಪಾವತಿಸತಕ್ಕದ್ದು.

1. ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.
   ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:–
   **ಅ) ಮಾಸಿಕ ವೇತನವನ್ನು ಪಡೆಯುವವರು:–** ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ x 30 ದಿನಗಳು= ತಿಂಗಳ ತುಟ್ಟಿಭತ್ಯೆ
   ಆ) **ದಿನಗೂಲಿ ವೇತನ ಪಡೆಯುವವರು :–**

   $$\frac{\text{ಪ್ರತಿ ವರ್ಷ ಹೆಚ್ಚಾಗುವ ಅಂಶಗಳು x ತುಟ್ಟಿಭತ್ಯೆಯ ದರ x 30}}{26} = \text{ದಿನದ ತುಟ್ಟಿಭತ್ಯೆ}$$

2. ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು
3. ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ವೇತನ ದರಗಳನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.
4. ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.
5. ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.
6. ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ದಿನಗಳಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.
7. ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.
8. ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.
9. ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.
10. ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.
11. ಈ ಅಧಿಸೂಚನೆಯಲ್ಲಿ ನಿಗಧಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.
12. ನೌಕರರುಗಳ ವೇತನವನ್ನು ಚೆಕ್ ಮೂಲಕ ಪಾವತಿಸುವುದು ಅಥವಾ ನೌಕರರ ಬ್ಯಾಂಕ್ ಖಾತೆಗೆ ನೇರವಾಗಿ ಜಮೆ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎ.ಎನ್. ರಾಧಾಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು ೨೦೦

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ-IVA | ಬೆಂಗಳೂರು, ಶನಿವಾರ, ಆಗಸ್ಟ್ ೬, ೨೦೧೬ (ಶ್ರಾವಣ ೧೫, ಶಕ ವರ್ಷ ೧೯೩೮) | ನಂ. ೯೯೫ |
|---|---|---|
| *Part-IVA* | *Bengaluru, Saturday, August 6, 2016 (Shravana 15, Shaka Varsha 1938)* | *No. 995* |


**ಕಾರ್ಮಿಕ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಾಇ 71 ಎಲ್‌ಡಬ್ಲ್ಯೂಎ 2015, ಬೆಂಗಳೂರು, ದಿನಾಂಕ: 05-08-2016.**

ಕರ್ನಾಟಕ ರಾಜ್ಯಾದ್ಯಂತ **"ನಗರ ಸ್ಥಳೀಯ ಸಂಸ್ಥೆಗಳು"** ಹಾಗೂ **"ಪಟ್ಟಣ ಮತ್ತು ಗ್ರಾಮ ಪಂಚಾಯ್ತಿ ಸಂಸ್ಥೆಗಳು"** ಉದ್ದಿಮೆಗಳಲ್ಲಿ ಯಾವುದೇ ಕೆಲಸದಲ್ಲಿ ತೊಡಗಿರುವ ಕಾರ್ಮಿಕರಿಗೆ ಕೆಳಕಂಡ ಅನುಸೂಚಿಯಲ್ಲಿ ನಿರ್ಧಿಷ್ಟಪಡಿಸಿರುವಂತೆ ಕನಿಷ್ಠ ವೇತನವನ್ನು ಪರಿಷ್ಕರಿಸಲು ಸರ್ಕಾರದ ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯಪತ್ರದ ಭಾಗ-4ಎ ರಲ್ಲಿ ದಿ:30-07-2015ರಂದು ಪ್ರಕಟಿಸಿ, 1948ರ ಕನಿಷ್ಠ ವೇತನ ಕಾಯ್ದೆಯ (ಕೇಂದ್ರ ನಿಯಮ ಸಂಖ್ಯೆ: XI) ಕಲಂ 5(1)(ಬಿ) ಖಂಡದ ಮೇರೆಗೆ ಭಾಧಿತರಾಗುವ/ಸಂಬಂಧವಿರುವ ವ್ಯಕ್ತಿಗಳ ಗಮನಕ್ಕೆ ತರಲಾಗಿದ್ದು, ಅವರಿಂದ ಸಲಹೆ/ಆಕ್ಷೇಪಣೆಗಳನ್ನು ಸ್ವೀಕರಿಸಲು ಎರಡು ತಿಂಗಳ ಕಾಲಾವಕಾಶವನ್ನು ನೀಡಲಾಗಿತ್ತು. ಸ್ವೀಕೃತಗೊಂಡ ಸಲಹೆ/ಆಕ್ಷೇಪಣೆಗಳು ಮತ್ತು ಕರಡು ಪ್ರಸ್ತಾವನೆಯನ್ನು ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಮುಂದೆ ಮಂಡಿಸಲಾಗಿತ್ತು. ಸದರಿ ಮಂಡಳಿಯಲ್ಲಿ ಸರ್ಕಾರದ ಪ್ರಸ್ತಾವನೆಯನ್ನು ಸುಧೀರ್ಘವಾಗಿ ಸಮಾಲೋಚಿಸಿ, ಅಂತಿಮ ಅಧಿಸೂಚನೆಯನ್ನು ಹೊರಡಿಸಲು ಮಂಡಳಿಯು ಸರ್ಕಾರಕ್ಕೆ ತನ್ನ ಶಿಫಾರಸ್ಸನ್ನು ನೀಡಿರುತ್ತದೆ.

ಕರ್ನಾಟಕ ರಾಜ್ಯ ಕನಿಷ್ಠ ವೇತನ ಸಲಹಾ ಮಂಡಳಿಯ ಶಿಫಾರಸ್ಸನ್ನು ಗಣನೆಗೆ ತೆಗೆದುಕೊಂಡು, 1948ರ ಕನಿಷ್ಠ ವೇತನ ಕಾಯ್ದೆಯ (ಕೇಂದ್ರದ ನಿಯಮ ಸಂಖ್ಯೆ: XI) ಕಲಂ 3(1)(ಬಿ) ಖಂಡ ಹಾಗೂ ಕಲಂ 5(1)(ಬಿ) ಖಂಡದ ಮೂಲಕ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಮತ್ತು ಈ ಹಿಂದಿನ ಎಲ್ಲಾ ಅಧಿಸೂಚನೆಗಳನ್ನು ರದ್ದುಪಡಿಸಿ, ಕರ್ನಾಟಕ ರಾಜ್ಯಾದ್ಯಾಂತ **"ನಗರ ಸ್ಥಳೀಯ ಸಂಸ್ಥೆಗಳು"** ಹಾಗೂ **"ಪಟ್ಟಣ ಮತ್ತು ಗ್ರಾಮ ಪಂಚಾಯ್ತಿ ಸಂಸ್ಥೆಗಳು"** ಉದ್ದಿಮೆಯಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಅನ್ವಯವಾಗುವಂತೆ ಕನಿಷ್ಠ ವೇತನವನ್ನು ಈ ಅಧಿಸೂಚನೆಯ ಅನುಸೂಚಿಯಲ್ಲಿ ಇರುವಂತೆ ಪರಿಷ್ಕರಿಸಲಾಗಿದೆ.

**ಅನುಸೂಚಿ**

| ಕ್ರ. ಸಂ | ಕೆಲಸದ ವರ್ಗಗಳು | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಹಾಗೂ ರಾಜ್ಯದ ಎಲ್ಲಾ ಮಹಾನಗರ ಪಾಲಿಕೆಗಳು | ರಾಜ್ಯದ ಎಲ್ಲಾ ನಗರಸಭೆಗಳು (ಗ್ರೇಡ್-1) | ರಾಜ್ಯದ ಎಲ್ಲಾ ನಗರಸಭೆಗಳು (ಗ್ರೇಡ್-2) ಹಾಗೂ ಪುರಸಭೆಗಳು | ರಾಜ್ಯದ ಎಲ್ಲಾ ಪಟ್ಟಣ ಪಂಚಾಯಿತಿ ಮತ್ತು ಗ್ರಾಮ ಪಂಚಾಯಿತಿಗಳು |
|---|---|---|---|---|---|
| | | ಮಾಸಿಕ ದರಗಳು | | | |
| 1 | ➢ *ಗ್ರಂಥಪಾಲಕ/ ಗ್ರಂಥಾಲಯ ಮೇಲ್ವಿಚಾರಕರು*<br>➢ *ಕೆಮಿಸ್ಟ್*<br>➢ *ಸೂಪರ್ ವೈಸರ್ (ಸ್ಯಾನಿಟರಿ)* | 14,630-00 | 14,190-00 | 13,761-00 | 13,200-00 |

| | | | | | |
|---|---|---|---|---|---|
| 2 | ➢ ಗುಮಾಸ್ತ<br>➢ ಕ್ಲರ್ಕ್<br>➢ ಕಂಪ್ಯೂಟರ್ ಆಪರೇಟರ್<br>➢ ಡಾಟಾ ಎಂಟ್ರಿ ಆಪರೇಟರ್<br>➢ ಕರ ವಸೂಲಿಗಾರರು<br>➢ *ಎಲೆಕ್ಟ್ರೀಷಿಯನ್*<br>➢ *ಲ್ಯಾಬ್‌ಟೆಕ್ನಿಷಿಯನ್*<br>➢ *ಸಹಾಯಕ ಗ್ರಂಥಪಾಲಕ* | 13,365–00 | 12,958–00 | 12,606–00 | 12,122–00 |
| 3 | ಚಾಲಕರು ಕಂ ಆಪರೇಟರ್ಸ್<br>➢ ಯುಜಿಡಿ<br>➢ ಜೆಸಿಪಿ<br>➢ ಕಾಂಪಾಕ್ಟ್ ಮಷಿನ್<br>➢ ಸ್ವೀಪಿಂಗ್ ಮಷಿನ್ | 12,650–00 | 12,265–00 | 11,935–00 | 11,440–00 |
| 4 | ಚಾಲಕರು<br>➢ ಲಾರಿ/ಬಸ್ಸು/ ಟ್ರಾಕ್ಟರ್/ಜೀಪು/ಕಾರು | 12,045–00 | 11,715–00 | 11,385–00 | 10,945–00 |
| | ➢ ಕ್ಲೀನರ್ಸ್ | 11,011–00 | 10,725–00 | 10,439–00 | 10,010–00 |
| 5 | ➢ ಪಂಪ್‌ಆಪರೇಟರ್<br>➢ ಮೆಕ್ಯಾನಿಕ್<br>➢ ಬಾಲವಾಡಿ ಕಾರ್ಯಕರ್ತರು<br>➢ *ಪ್ಲಂಬರ್*<br>➢ *ಹಾರ್ಟಿಕಲ್ಚರ್ ಅಸಿಸ್ಟಂಟ್*<br>➢ *ಪಂಪು ರಿಪೇರಿ ಮಾಡುವವರು*<br>➢ ವಾಟರ್ ಮ್ಯಾನ್ (ನೀರುಗಂಟಿ)<br>➢ *ವಾಲ್ವ್ ಮ್ಯಾನ್ (ನೀರು ಸರಬರಾಜು)* | 11,632–00 | 11,330–00 | 11,028–00 | 10,588–00 |
| 6 | ➢ ಜವಾನರು<br>➢ ಅಟೆಂಟರ್<br>➢ *ಗಾರ್ಡನರ್*<br>➢ *ದಫೆದಾರ್*<br>➢ *ಸ್ಮಶಾನ ಕಾವಲುಗಾರ*<br>➢ *ಕಾವಲುಗಾರ*<br>➢ *ಕಛೇರಿ ಮತ್ತು ಆವರಣ ಸ್ವಚ್ಛತೆಗಾರ / ಶುಚಿಗೊಳಿಸುವುದು*<br>➢ *ಕುಶಲರಲ್ಲದ ಇತರೆ ವರ್ಗಗಳು* | 11,011–00 | 10,725–00 | 10,439–00 | 10,010–00 |

<table>
<tr>
<td rowspan="3">7</td>
<td rowspan="3">➢ ರಸ್ತೆಗಳನ್ನು ಗುಡಿಸುವುದು<br>➢ ಯಂತ್ರಗಳ ಸಹಾಯದಿಂದ ಒಳಗೊಂಡಂತೆ ಶುಚಿತ್ವಗೊಳಿಸುವುದನ್ನು ಒಳಗೊಂಡಂತೆ ಒಳಚರಂಡಿ, ಸ್ನಾನಗೃಹ ಮತ್ತು ಶೌಚಾಲಯಗಳನ್ನು ಸ್ವಚ್ಛಗೊಳಿಸುವುದು<br>➢ ಕಸ ಮತ್ತು ತ್ಯಾಜ್ಯ ವಸ್ತುಗಳ ವಿಲೇವಾರಿ, ಲೋಡಿಂಗ್ ಮತ್ತು ಅನ್‌ಲೋಡಿಂಗ್ ಕೆಲಸ</td>
<td>14,040–00*</td>
<td>13,650–00*</td>
<td>13,260–00*</td>
<td>12,870–00*</td>
</tr>
<tr>
<td colspan="4">* ಕ್ರ.ಸಂ.7 ರಡಿ ನಮೂದಿಸಿರುವ ಮೂಲವೇತನ ದರಗಳು ಕ್ರಮ ಸಂಖ್ಯೆ 6ರಡಿ ತಿಳಿಸಲಾಗಿರುವ ಮೂಲ ವೇತನಕ್ಕೆ ಆರೋಗ್ಯ ಹಾನಿಕಾರಕ ಭತ್ಯೆ, ಆಪತ್ತು ಭತ್ಯೆ, ಶುಚಿತ್ವ ಭತ್ಯೆಗಳನ್ನು ಸೇರಿಸಲ್ಪಟ್ಟ ಒಟ್ಟು ಮೂಲವೇತನವಾಗಿರುತ್ತದೆ.</td>
</tr>
<tr>
<td colspan="4">ನೌಕರರುಗಳಿಗೆ ಕೆಲಸ ಮಾಡಲು ಈ ಕೆಳಕಂಡ ವಸ್ತುಗಳು, ಸುರಕ್ಷತಾ ಸಾಮಗ್ರಿಗಳು ಮತ್ತು ಸೌಲಭ್ಯಗಳನ್ನು ಪ್ರಧಾನ ಮಾಲೀಕರು/ ಗುತ್ತಿಗೆದಾರರು ಒದಗಿಸತಕ್ಕದ್ದು.<br>1) ವಿಶ್ರಾಂತಿ ಗೃಹ (rest rooms)<br>2) ಕುಡಿಯುವ ನೀರಿನ ವ್ಯವಸ್ಥೆ (drinking water facilities)<br>3) ಶೌಚಾಲಯದ ವ್ಯವಸ್ಥೆ (toilets)<br>4) ಪ್ರಥಮ ಚಿಕಿತ್ಸಾ ಸೌಲಭ್ಯಗಳು (first aid facilities)<br>5) ಶುಚಿತ್ವ ಸೌಲಭ್ಯಗಳು (washing facilities)<br>6) ಸಮವಸ್ತ್ರ (uniforms)<br>7) ಹ್ಯಾಂಡ್‌ಗ್ಲೋವ್ಸ್ (hand gloves-leather)<br>8) ಟೋಪಿ (caps)<br>9) ರಬ್ಬರಿನ ಬೂಟುಗಳು (gumboots with ISI mark)<br>10) ಚಪ್ಪಲಿಗಳು (slippers)<br>11) ಶುಚಿಗೊಳಿಸುವ ಸಾಧನಗಳು ಹಾಗೂ ಉಪಕರಣಗಳು<br>12) ಕಸಬರಿಕೆ (long handle broom, broomstick with wiring)<br>13) ತುರಿಮಣೆ (drain scrappers – 18” gauge 6” x 9” , collection plate, hand scrappers 16 gauge iron sheet 9” x 4” bended )<br>14) ಕಳೆ ಗುದ್ದಲಿ (hoe with wooden handle weighing 14kg)<br>15) ಸಲಿಕೆ (spade)<br>16) ಮಾಸ್ಕ್ (nose mask- dust free respirator)<br>17) ಗಮೇಲ (ghamela)<br>18) ಕಳೆ ತಗೆಯುವಯಂತ್ರ (weed cutting machine)<br>19) ಚರಂಡಿ ಶುಚಿಗೊಳಿಸುವ ಸಾಧನಗಳು (draincleaning equipments)<br>20) ಬಿದಿರಿನ ಬುಟ್ಟಿಗಳು (bamboo baskets 20” dia , 11” dip)<br>21) ಹೊರೆಬಂಡಿ (push carts)<br>22) ಫಿನೈಲ್ ಮತ್ತು ಬ್ಲೀಚಿಂಗ್ ಪೌಡರ್</td>
</tr>
</table>

**ತುಟ್ಟಿಭತ್ಯೆ:**

ತುಟ್ಟಿಭತ್ಯೆ ಲೆಕ್ಕಾಚಾರವನ್ನು ವರ್ಷಕ್ಕೊಮ್ಮೆ ಮಾಡಲಾಗುತ್ತದೆ. ಹಿಂದಿನ ಕ್ಯಾಲೆಂಡರ್ ವರ್ಷದ 12 ತಿಂಗಳುಗಳ ಗ್ರಾಹಕ ಬೆಲೆ ಸೂಚ್ಯಾಂಕಗಳ ಸರಾಸರಿ ಆಧಾರದ ಮೇಲೆ ಏಪ್ರಿಲ್ ಮೊದಲನೇ ದಿನಾಂಕದಂದು ಪ್ರತಿ ವರ್ಷ ಲೆಕ್ಕಾಚಾರ ಮಾಡತಕ್ಕದ್ದು. ಅಲ್ಲದೇ ಗ್ರಾಹಕ ಬೆಲೆ ಸೂಚ್ಯಂಕಗಳ ಸಂಖ್ಯೆಯ ವಾರ್ಷಿಕ ಸರಾಸರಿ ಆಧಾರದ ಮೇಲೆ ಹೆಚ್ಚುವರಿಯಾದ ಅಥವಾ ಕಡಿಮೆಯಾದ ಪ್ರಮಾಣವನ್ನು ಆಧರಿಸಿ ಲೆಕ್ಕ ಹಾಕಲಾಗುತ್ತದೆ. ಆದ್ದರಿಂದ ಮೊದಲ ಲೆಕ್ಕಾಚಾರವು ಗ್ರಾಹಕ ಬೆಲೆ ಸೂಚ್ಯಾಂಕದ (ಜನವರಿ 2015 ರಿಂದ ಡಿಸೆಂಬರ್ 2015) ಸರಾಸರಿ ಆಧಾರದ ಮೇಲೆ

2016ರ ಏಪ್ರಿಲ್ 1ನೇ ತಾರೀಖಿನಿಂದ ಜಾರಿಗೆ ಬರುತ್ತದೆ. ಅಂದರೆ, ರಾಜ್ಯ ಸರಾಸರಿ ಗ್ರಾಹಕ ಬೆಲೆ ಸೂಚ್ಯಾಂಕ 6205 ಅಂಶಗಳಿಗಿಂತ ಹೆಚ್ಚಾಗುವ ಪ್ರತಿ ಅಂಶಕ್ಕೆ ಎಲ್ಲಾ ವರ್ಗದ ಕಾರ್ಮಿಕರಿಗೆ ದಿನ ಒಂದಕ್ಕೆ 4 ಪೈಸೆಯಂತೆ ತುಟ್ಟಿ ಭತ್ಯೆ ಪಾವತಿಸತಕ್ಕದ್ದು.

1) ದಿನಗೂಲಿ ಗಳಿಕೆದಾರರ ಸಂದರ್ಭದಲ್ಲಿ ಮಾಸಿಕ ವೇತನ ದರಗಳನ್ನು 26 ದಿನಗಳಿಂದ ವಿಭಾಗಿಸಿ, 4 ರಜಾ ದಿನಗಳಿಗೆ ವೇತನವನ್ನು ನೀಡುವುದೂ ಸೇರಿದಂತೆ ಲೆಕ್ಕ ಹಾಕತಕ್ಕದ್ದು.

   **ತುಟ್ಟಿಭತ್ಯೆಯನ್ನು ಲೆಕ್ಕಾಚಾರ ಮಾಡುವ ವಿಧಾನ:–**

   **ಅ) ಮಾಸಿಕ ವೇತನವನ್ನು ಪಡೆಯುವವರು:–** ಪ್ರತಿ ವರ್ಷ ಹೆಚ್ಚಾಗುವ ಸಿ ಪಿ ಐ ಅಂಶಗಳು x ತುಟ್ಟಿಭತ್ಯೆಯ ದರ X 30 ದಿನಗಳು = ತಿಂಗಳ ತುಟ್ಟಿಭತ್ಯೆ

   **ಆ) ದಿನಗೂಲಿ ವೇತನ ಪಡೆಯುವವರು :–**

$$\frac{\text{ಪ್ರತಿ ವರ್ಷ ಹೆಚ್ಚಾಗುವ ಅಂಶಗಳು X ತುಟ್ಟಿಭತ್ಯೆಯ ದರ X 30}}{26} = \text{ದಿನದ ತುಟ್ಟಿಭತ್ಯೆ}$$

2) ಮಹಿಳೆಯರು ಮತ್ತು ಪುರುಷರು ಒಂದೇ ರೀತಿಯ ಕೆಲಸವನ್ನು ನಿರ್ವಹಿಸಿದ ಸಂದರ್ಭಗಳಲ್ಲಿ ಉಭಯತ್ರರಿಗೂ ಸಮಾನ ದರದ ವೇತನಗಳನ್ನು ಸಂದಾಯ ಮಾಡತಕ್ಕದ್ದು

3) ಪ್ರಸ್ತುತ ಪಾವತಿಸುತ್ತಿರುವ ವೇತನ ದರವು ಹೆಚ್ಚಾಗಿದ್ದಲ್ಲಿ ಆ ವೇತನ ದರಗಳನ್ನು ಸಂದಾಯ ಮಾಡುವುದನ್ನು ಮುಂದುವರೆಸತಕ್ಕದ್ದು ಹಾಗೂ ಕಡ್ಡಾಯವಾಗಿ ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಸಹ ಪಾವತಿಸತಕ್ಕದ್ದು.

4) ಅಧಿಸೂಚನೆಯಲ್ಲಿ ವರ್ಗವನ್ನು ನಮೂದಿಸದೆ ಇರುವ ವರ್ಗಗಳ ಕಾರ್ಮಿಕರಿಗೆ ಅದೇ ಸ್ವರೂಪದ ಕೆಲಸ ನಿರ್ವಹಿಸುತ್ತಿರುವ ಇತರೆ ವರ್ಗದ ಕಾರ್ಮಿಕ'ರಿಗೆ ಪಾವತಿ ಮಾಡುತ್ತಿರುವ ವೇತನವನ್ನು ಸಂದಾಯ ಮಾಡತಕ್ಕದ್ದು.

5) ತುಂಡು ಆಧಾರದ ಮೇಲೆ ಕೆಲಸ ಮಾಡುವ ಕಾರ್ಮಿಕರ 8 ಗಂಟೆಗಳ ಕೆಲಸದ ವೇತನವು ಅದೇ ತರಹದ ಕೆಲಸ ಮಾಡುವ ಕಾರ್ಮಿಕರ ಒಂದು ದಿನದ ವೇತನಕ್ಕಿಂತ ಕಡಿಮೆ ಇರಕೂಡದು. ಒಂದು ದಿನದ ಕೆಲಸ ಎಂದರೆ 8 ಗಂಟೆಗಳ ಕೆಲಸ ಎಂದು ತಿಳಿಯತಕ್ಕದ್ದು. ಕಾರ್ಮಿಕರನ್ನು 8 ಗಂಟೆಗಳಿಗಿಂತ ಕಡಿಮೆ ಅವಧಿಯ ಕೆಲಸಕ್ಕೆ ನೇಮಿಸಿಕೊಂಡರೆ ಅಂತಹ ಕಡಿಮೆ ಅವಧಿಗೆ ಅನುಗುಣವಾಗಿ ವೇತನವನ್ನು ಆ ವರ್ಗದ ದಿನದ ಅಥವಾ ತಿಂಗಳ ವೇತನದ ಆಧಾರದ ಮೇಲೆ ಲೆಕ್ಕ ಹಾಕುವುದು.

6) ದಿನಗೂಲಿ ನೌಕರರಿಗೆ ಅವರ ದಿನದ ವೇತನ ದರಗಳನ್ನು ಕಂಡು ಹಿಡಿಯಬೇಕಾದಲ್ಲಿ ತಿಂಗಳ ವೇತನ ದರವನ್ನು 26 ದಿನಗಳಿಂದ ಭಾಗಿಸಬೇಕು. ಭಾಗಿಸಿದಾಗ ಬಂದ ದರವು ಭಿನ್ನಾಂಕವಾಗಿದ್ದಲ್ಲಿ ಅದನ್ನು ಸಮೀಪದ ರೂಪಾಯಿಗೆ ಪೂರ್ಣಗೊಳಿಸುವುದು.

7) ಸಂಸ್ಥೆಯಲ್ಲಿ ನಿಗದಿಪಡಿಸಿರುವ ವಾರದ ರಜೆ ಅಥವಾ ಹಬ್ಬದ ರಜಾ ದಿನಗಳಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಕನಿಷ್ಠ ವೇತನ ಕಾಯ್ದೆ ಮತ್ತು ನಿಯಮಗಳಿಗೆ ಒಳಪಟ್ಟು ಸಾಮಾನ್ಯ ವೇತನದ ಎರಡುಪಟ್ಟು ವೇತನವನ್ನು ಪಾವತಿ ಮಾಡತಕ್ಕದ್ದು.

8) ಕೆಲಸಗಾರರು ದಿನದ ನಿಗಧಿತ ಅವಧಿಗಿಂತ ಹೆಚ್ಚು ಸಮಯ ಕೆಲಸ ನಿರ್ವಹಿಸಿದಲ್ಲಿ ಅಂತಹ ಹೆಚ್ಚುವರಿ ಅವಧಿ ಕೆಲಸಕ್ಕೆ ಆತನ ವೇತನದ ಎರಡುಪಟ್ಟು ವೇತನವನ್ನು ಪಾವತಿಸತಕ್ಕದ್ದು.

9) ವೇತನ ಲೆಕ್ಕಾಚಾರದಲ್ಲಿ ಚಿಲ್ಲರೆ ಬಂದ ಪಕ್ಷದಲ್ಲಿ ಅದನ್ನು ಸಮೀಪದ 50 ಪೈಸೆಗೆ ಪೂರ್ಣಗೊಳಿಸುವುದು.

10) ಟ್ರೈನಿಗಳಿಗೆ ಆ ವರ್ಗದ ನೌಕರರು ಪಡೆಯುತ್ತಿರುವ ವೇತನದ ಪ್ರತಿಶತ 75 ರಷ್ಟು ವೇತನವನ್ನು ಶಿಷ್ಯ ವೇತನವನ್ನಾಗಿ ಪಾವತಿಸತಕ್ಕದ್ದು.

11) ಈ ಅಧಿಸೂಚನೆಯಲ್ಲಿ ನಿಗಧಿಪಡಿಸಿರುವ ವೇತನ ದರಗಳನ್ನು ಮತ್ತು ಕಾಲಕಾಲಕ್ಕೆ ಹೆಚ್ಚಾಗುವ ತುಟ್ಟಿಭತ್ಯೆಯನ್ನು ಆಯಾ ಅಂಕಣಗಳಲ್ಲಿಯೇ ನಮೂದಿಸಿ ಪಾವತಿ ಮಾಡತಕ್ಕದ್ದು.

12) ನೌಕರರುಗಳ ವೇತನವನ್ನು ಚೆಕ್ ಮೂಲಕ ಪಾವತಿಸುವದು ಅಥವಾ ನೌಕರರ ಬ್ಯಾಂಕ್ ಖಾತೆಗೆ ನೇರವಾಗಿ ಜಮೆ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ.

**ಎ.ಎನ್. ರಾಧಾಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 200

RNI No. KARBIL/2001/47147

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

**ವಿಶೇಷ ರಾಜ್ಯ ಪತ್ರಿಕೆ**

| ಭಾಗ–IVA | ಬೆಂಗಳೂರು, ಸೋಮವಾರ, ಆಗಸ್ಟ್ ೮, ೨೦೧೬ (ಶ್ರಾವಣ ೧೭, ಶಕ ವರ್ಷ ೧೯೩೮) | ನಂ. ೯೯೭ |
|---|---|---|
| *Part–IVA* | *Bengaluru, Monday, August 8, 2016 (Shravana 17, Shaka Varsha 1938)* | *No. 997* |


**ಸಂಸದೀಯ ವ್ಯವಹಾರಗಳ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಸಂವ್ಯಶಾಇ 38 ಶಾಸನ 2014, ಬೆಂಗಳೂರು, ದಿನಾಂಕ: 08.08.2016.**

ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ (ತಿದ್ದುಪಡಿ) ವಿಧೇಯಕ, 2016ಕ್ಕೆ 2016ರ ಆಗಸ್ಟ್ ತಿಂಗಳ ನಾಲ್ಕನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆ ದೊರೆತಿದ್ದು, ಸಾಮಾನ್ಯ ತಿಳುವಳಿಕೆಗಾಗಿ ಇದನ್ನು 2016ರ ಕರ್ನಾಟಕ ಅಧಿನಿಯಮ ಸಂಖ್ಯೆ:27 ಎಂಬುದಾಗಿ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಿಸಬೇಕೆಂದು ಆದೇಶಿಸಲಾಗಿದೆ.

**2016 ರ ಕರ್ನಾಟಕ ಅಧಿನಿಯಮ ಸಂಖ್ಯೆ:27**

(2016ರ ಆಗಸ್ಟ್ ಎಂಟನೇ ದಿನಾಂಕದಂದು ಕರ್ನಾಟಕ ರಾಜ್ಯಪತ್ರದ ವಿಶೇಷ ಸಂಚಿಕೆಯಲ್ಲಿ ಮೊದಲು ಪ್ರಕಟವಾಗಿದೆ)

**ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ (ತಿದ್ದುಪಡಿ) ಅಧಿನಿಯಮ, 2016**

(2016ರ ಆಗಸ್ಟ್ ನಾಲ್ಕನೇ ದಿನಾಂಕದಂದು ರಾಜ್ಯಪಾಲರ ಒಪ್ಪಿಗೆಯನ್ನು ಪಡೆಯಲಾಗಿದೆ)

ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ಅಧಿನಿಯಮ, 2009ನ್ನು ತಿದ್ದುಪಡಿ ಮಾಡಲು ಒಂದು ಅಧಿನಿಯಮ.

ಇಲ್ಲಿ ಇನ್ನು ಮುಂದೆ ಕಂಡುಬರುವ ಉದ್ದೇಶಗಳಿಗಾಗಿ ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ಅಧಿನಿಯಮ, 2009ನ್ನು (2009ರ ಕರ್ನಾಟಕ ಅಧಿನಿಯಮ 11) ತಿದ್ದುಪಡಿ ಮಾಡುವುದು ಯುಕ್ತವಾಗಿರುವುದರಿಂದ;

ಇದು ಭಾರತ ಗಣರಾಜ್ಯದ ಅರವತ್ತೇಳನೇ ವರ್ಷದಲ್ಲಿ ಕರ್ನಾಟಕ ರಾಜ್ಯ ವಿಧಾನಮಂಡಲದಿಂದ ಈ ಮುಂದಿನಂತೆ ಅಧಿನಿಯಮಿತವಾಗತಲಿ:–

**1. ಸಂಕ್ಷಿಪ್ತ ಹೆಸರು ಮತ್ತು ಪ್ರಾರಂಭ.**–(1) ಈ ಅಧಿನಿಯಮವನ್ನು ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ (ತಿದ್ದುಪಡಿ) ಅಧಿನಿಯಮ, 2016 ಎಂದು ಕರೆಯತಕ್ಕದ್ದು.

(2) ಇದು ಈ ಕೂಡಲೇ ಜಾರಿಗೆ ಬರತಕ್ಕದ್ದು.

**2. 2ನೇ ಪ್ರಕರಣದ ತಿದ್ದುಪಡಿ.**– ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯ ಅಧಿನಿಯಮ, 2009ರ (2009ರ ಕರ್ನಾಟಕ ಅಧಿನಿಯಮ 11) (ಇಲ್ಲಿ ಇನ್ನು ಮುಂದೆ ಮೂಲ ಅಧಿನಿಯಮವೆಂದು ಉಲ್ಲೇಖಿಸಲಾಗಿದೆ) 2ನೇ ಪ್ರಕರಣದ (ಎಲ್) ಖಂಡದಲ್ಲಿ, "ಪ್ರಾಧ್ಯಾಪಕರು, ಪ್ರವಾಚಕರು, ಪೂರ್ಣಕಾಲಿಕ ಅಥವಾ ಅರೆ ಕಾಲಿಕ ಉಪನ್ಯಾಸಕರು, ಹಿರಿಯ ಶ್ರೇಣಿ ಉಪನ್ಯಾಸಕರು, ಆಯ್ಕೆಶ್ರೇಣಿ ಉಪನ್ಯಾಸಕರು" ಎಂಬ ಪದಗಳಿಗೆ "ಪೂರ್ಣಕಾಲಿಕ ಅಥವಾ ಅರೆಕಾಲಿಕ ಪ್ರಾಧ್ಯಾಪಕರು,

ಸಹವರ್ತಿ ಪ್ರಾಧ್ಯಾಪಕರು ಮತ್ತು ಸಹಾಯಕ ಪ್ರಾಧ್ಯಾಪಕರು" ಎಂಬ ಪದಗಳು ಮತ್ತು ಅಲ್ಪವಿರಾಮ ಚಿಹ್ನೆಗಳನ್ನು ಪ್ರತಿಯೋಜಿಸತಕ್ಕದ್ದು;

**3. 3ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 3ನೇ ಪ್ರಕರಣದ (3)ನೇ ಉಪಪ್ರಕರಣದಲ್ಲಿ "ರಾಯಪುರ ಗ್ರಾಮದಲ್ಲಿರತಕ್ಕದ್ದು" ಎಂಬ ಪದಗಳಿಗೆ "ನವನಗರದಲ್ಲಿರತಕ್ಕದ್ದು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**4. 4ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 4ನೇ ಪ್ರಕರಣದ (1)ನೇ ಉಪಪ್ರಕರಣದ (ಎಫ್) ಖಂಡದಲ್ಲಿ "ಮತ್ತು ನ್ಯಾಯಿಕ ಸೇವೆಗಳನ್ನು ಒದಗಿಸುವವರಿಗೆ" ಎಂಬ ಪದಗಳಿಗೆ ",ನ್ಯಾಯಿಕ ಸೇವೆಗಳನ್ನು ಒದಗಿಸುವವರಿಗೆ, ಸರ್ಕಾರಿ ಅಧಿಕಾರಿಗಳಿಗೆ ಮತ್ತು ಸಿಬ್ಬಂದಿಗಳಿಗೆ" ಎಂಬ ಪದಗಳನ್ನು ಅಲ್ಪವಿರಾಮ ಚಿಹ್ನೆಯೊಂದಿಗೆ ಪ್ರತಿಯೋಜಿಸತಕ್ಕದ್ದು.

**5. 5ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 5ನೇ ಪ್ರಕರಣದ (xvi) ನೇ ಖಂಡದಲ್ಲಿ "ಉಪನ್ಯಾಸಕರ, ಪ್ರವಾಚಕರ, ಪ್ರಾಧ್ಯಾಪಕರ ಮತ್ತು ಇತರೆ ಬೋಧಕ ಸಿಬ್ಬಂದಿಯ" ಎಂಬ ಪದಗಳಿಗೆ "ಅಧ್ಯಾಪಕರ" ಎಂಬ ಪದವನ್ನು ಪ್ರತಿಯೋಜಿಸತಕ್ಕದ್ದು.

**6. 14ನೇ ಪ್ರಕರಣದ ತಿದ್ದುಪಡಿ.–**ಮೂಲ ಅಧಿನಿಯಮದ 14ನೇ ಪ್ರಕರಣದಲ್ಲಿ,–

(ಎ) (1) ಮತ್ತು (3)ನೇ ಉಪಪ್ರಕರಣಗಳಲ್ಲಿ "ಖ್ಯಾತ ವಿದ್ವಾಂಸರ" ಎಂಬ ಪದಗಳಿಗೆ "ಪ್ರಸಿದ್ಧ ವಿದ್ವಾಂಸರ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

(ಬಿ) (2)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(2ಎ) ಕುಲಪತಿಯಾಗಿ ನೇಮಿಸಲ್ಪಡಬೇಕಾದ ವ್ಯಕ್ತಿಯು ಉನ್ನತ ದರ್ಜೆಯ ಸಕ್ಷಮತೆ, ನಿಷ್ಠೆ, ನೀತಿ ಮತ್ತು ಸಾಂಸ್ಥಿಕ ಹೊಣೆಗಾರಿಕೆಯ ಜೊತೆಗೆ ಒಂದು ವಿಶ್ವವಿದ್ಯಾಲಯದಲ್ಲಿ ಕಾನೂನು ಪ್ರಾಧ್ಯಾಪಕರಾಗಿ ಹತ್ತು ವರ್ಷಗಳಿಗಿಂತ ಕಡಿಮೆಯಿಲ್ಲದ ಸೇವಾನುಭವ ಅಥವಾ ಕಾನೂನು ಕ್ಷೇತ್ರದಲ್ಲಿನ ಖ್ಯಾತ ಸಂಶೋಧನಾ ಮತ್ತು/ಅಥವಾ ವಿದ್ಯಾ ವಿಷಯಕ ಆಡಳಿತಾತ್ಮಕ ಸಂಸ್ಥೆಯಲ್ಲಿ ತತ್ಸಮಾನ ಹುದ್ದೆಯಲ್ಲಿ ಹತ್ತು ವರ್ಷಗಳಿಗಿಂತ ಕಡಿಮೆಯಲ್ಲದ ಸೇವಾನುಭವವನ್ನು ಹೊಂದಿರತಕ್ಕದ್ದು."

(ಸಿ) (5)ನೇ ಉಪಪ್ರಕರಣದಲ್ಲಿ "65 ವರ್ಷಗಳಾಗುವವರೆಗೆ" ಎಂಬ ಪದಗಳಿಗೆ "ಅರವತ್ತೇಳು ವರ್ಷಗಳಾಗುವವರೆಗೆ" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**6ಎ. 17ನೇ ಪ್ರಕರಣದ ತಿದ್ದುಪಡಿ._** ಮೂಲ ಅಧಿನಿಯಮದ 17ನೇ ಪ್ರಕರಣದ (2)ನೇ ಉಪಪ್ರಕರಣಕ್ಕೆ ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

**"(2)** ರಾಜ್ಯ ಸರ್ಕಾರವು, ಗ್ರೂಪ್–2 ಹಿರಿಯ ವೇತನಶ್ರೇಣಿಗಿಂತ ಕಡಿಮೆಯಲ್ಲದ ಕಾನೂನು ಇಲಾಖೆಯ ಅಥವಾ ಸಂಸದೀಯ ವ್ಯವಹಾರಗಳ ಇಲಾಖೆಯ ಅಥವಾ ಭಾರತ ಆಡಳಿತ ಸೇವೆಗಳಿಗೆ ಸೇರಿದ ಅಥವಾ ಕರ್ನಾಟಕ ಆಡಳಿತ ಸೇವೆಗಳಿಗೆ ಸೇರಿದ ಒಬ್ಬ ಅಧಿಕಾರಿಯನ್ನು ಕುಲಸಚಿವರನ್ನಾಗಿ ನೇಮಿಸಬಹುದು.

ಪರಂತು, (2)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಯಾವೊಬ್ಬ ಅಧಿಕಾರಿಯೂ ಲಭ್ಯವಿಲ್ಲದಿದ್ದಲ್ಲಿ, ಪ್ರಾಧ್ಯಾಪಕರಾಗಿ ಐದು ವರ್ಷಗಳಿಗಿಂತ ಕಡಿಮೆಯಲ್ಲದೆ ಸೇವೆ ಸಲ್ಲಿಸಿರುವ ಒಬ್ಬ ಪ್ರಾಧ್ಯಾಪಕರನ್ನು ಕುಲಸಚಿವರನ್ನಾಗಿ ನೇಮಿಸಬಹುದು.'

**7. 18ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 18ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ ",ಹಣಕಾಸು ಸಮಿತಿ" ಎಂಬ ಪದಗಳನ್ನು ಅಲ್ಪವಿರಾಮ ಚಿಹ್ನೆಯೊಂದಿಗೆ ಬಿಟ್ಟುಬಿಡತಕ್ಕದ್ದು.

**8. 29ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 29ನೇ ಪ್ರಕರಣದ (3)ನೇ ಉಪಪ್ರಕರಣದ (ಎಚ್) ಖಂಡದಲ್ಲಿ "ಕುಲಪತಿಯವರು" ಎಂಬ ಪದಕ್ಕೆ ಮೊದಲು "ಜ್ಯೇಷ್ಠತೆಯ ಆಧಾರದ ಮೇಲೆ ಒಂದು ವರ್ಷದ ಅವಧಿಯವರೆಗೆ" ಎಂಬ ಪದಗಳನ್ನು ಸೇರಿಸತಕ್ಕದ್ದು.

**9. 33ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 33ನೇ ಪ್ರಕರಣದ (1)ನೇ ಉಪಪ್ರಕರಣದಲ್ಲಿ,–

(i) (ಎಚ್) ಖಂಡದಲ್ಲಿ "ಕುಲಪತಿಯವರು ಜ್ಯೇಷ್ಠತೆಯ ಕ್ರಮದಲ್ಲಿ" ಎಂಬ ಪದಗಳಿಗೆ "ಜ್ಯೇಷ್ಠತೆಯ ಆಧಾರದ ಮೇಲೆ ಒಂದು ವರ್ಷದ ಅವಧಿಯವರೆಗೆ ಕುಲಪತಿಯವರು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು; ಮತ್ತು

(ii) (ಎನ್) ಖಂಡದ ತರುವಾಯ, ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(ಒ) ಎರಡು ವರ್ಷಗಳ ಅವಧಿಯವರೆಗೆ ಕುಲಪತಿಯವರು ನಾಮನಿರ್ದೇಶಿಸಿದ ಒಬ್ಬ ಡೀನ್;"

**10. 58ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 58ನೇ ಪ್ರಕರಣದಲ್ಲಿ,–

(i) (5)ನೇ ಉಪಪ್ರಕರಣಕ್ಕೆ, ಈ ಮುಂದಿನದನ್ನು ಪ್ರತಿಯೋಜಿಸತಕ್ಕದ್ದು, ಎಂದರೆ:–

"(5) ಹೊಸ ಕಾಲೇಜಿನ, ಅಸ್ತಿತ್ವದಲ್ಲಿರುವ ಕಾಲೇಜಿನಲ್ಲಿ ಹೊಸ ಕೋರ್ಸಿನ ಸಂಯೋಜನೆಯ ಸಂದರ್ಭದಲ್ಲಿ ಮತ್ತು ಶಾಶ್ವತ ಸಂಯೋಜನೆಯ ಸಂದರ್ಭದಲ್ಲಿ, ಸರ್ಕಾರವು ಕಾಲಕಾಲಕ್ಕೆ ನಿರ್ದಿಷ್ಟಪಡಿಸಬಹುದಾದ ಅಂಥ ಅವಧಿಯೊಳಗೆ ಅರ್ಜಿಯನ್ನು ಹಾಗೂ ಪ್ರಶಿಕ್ಷಣ ಪರಿಷತ್ತು ಮತ್ತು ಪ್ರಶಾಸನ ಸಭೆಯ ನಡವಳಿಗಳು ಯಾವುದಾದರೂ ಇದ್ದಲ್ಲಿ, ಅದನ್ನು ಕುಲಸಚಿವರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು, ಅದು ತನಗೆ ಅವಶ್ಯಕವೆಂದು ಕಂಡುಬರುವ ಅಂಥ ವಿಚಾರಣೆಯ ತರುವಾಯ ಹೊಸ ಕಾಲೇಜಿಗೆ, ಅಸ್ತಿತ್ವದಲ್ಲಿರುವ ಕಾಲೇಜಿನಲ್ಲಿ ಹೊಸ ಕೋರ್ಸಿಗೆ ಅಥವಾ ಶಾಶ್ವತ ಸಂಯೋಜನೆ ಅಥವಾ ಅದರ ಯಾವುದೇ ಭಾಗಕ್ಕೆ ಸಂಯೋಜನೆಯನ್ನು ಮಂಜೂರು ಮಾಡಲು ಶಿಫಾರಸ್ಸು ಮಾಡಬಹುದು ಅಥವಾ ಸಂಯೋಜನೆಯನ್ನು ಅಥವಾ ಅದರ ಯಾವುದೇ ಭಾಗವನ್ನು ತಿರಸ್ಕರಿಸಬಹುದು ಮತ್ತು ಅದಕ್ಕೆ ಅನುಸಾರವಾಗಿ ವಿಶ್ವವಿದ್ಯಾಲಯವು ಆದೇಶಗಳನ್ನು ಹೊರಡಿಸತಕ್ಕದ್ದು:

ಪರಂತು, ಅಸ್ತಿತ್ವದಲ್ಲಿರುವ ಕಾಲೇಜುಗಳ ಸಂಯೋಜನೆಯನ್ನು ಮುಂದುವರೆಸುವ ಸಂದರ್ಭದಲ್ಲಿ ಸರ್ಕಾರದ ಶಿಫಾರಸ್ಸಿನ ಅಗತ್ಯವಿರತಕ್ಕದ್ದಲ್ಲ ಮತ್ತು ನಿಯಮಿಸಬಹುದಾದ ಅಂಥ ಪ್ರಕ್ರಿಯೆಯನ್ನು ಅನುಸರಿಸಿದ ತರುವಾಯ ಹಾಗೂ ಪ್ರಶಾಸನ ಸಭೆಯ ಅನುಮೋದನೆಯೊಂದಿಗೆ ಅಂಥ ಸಂಯೋಜನೆಯ ಮುಂದುವರಿಕೆಯನ್ನು ವಿಶ್ವವಿದ್ಯಾಲಯವು ಮಂಜೂರು ಮಾಡತಕ್ಕದ್ದು."

(ii) (6)ನೇ ಉಪಪ್ರಕರಣದಲ್ಲಿನ ಪರಂತುಕವನ್ನು ಬಿಟ್ಟುಬಿಡತಕ್ಕದ್ದು.

**11. 58ಎ ಹೊಸ ಪ್ರಕರಣದ ಸೇರ್ಪಡೆ.–** ಮೂಲ ಅಧಿನಿಯಮದ 58ನೇ ಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"**58ಎ ಶಾಶ್ವತ ಸಂಯೋಜನೆ.–** (1) ಐದು ವರ್ಷಕ್ಕಿಂತ ಕಡಿಮೆಯಿಲ್ಲದ ಅವಧಿಗೆ ನಿರಂತರವಾಗಿ ಸಂಯೋಜನೆಗೊಂಡ ಮತ್ತು ಸಂಯೋಜನೆಯ ಎಲ್ಲಾ ಷರತ್ತುಗಳನ್ನು ಪೂರೈಸಿರುವ ಹಾಗೂ ವಿಶ್ವವಿದ್ಯಾಲಯವು ಕಾಲಕಾಲಕ್ಕೆ ಗೊತ್ತುಪಡಿಸಿದ ವಿದ್ಯಾವಿಷಯಕ ಶ್ರೇಷ್ಠತೆ ಮತ್ತು ಸರಾಸರಿ ಆಡಳಿತಾತ್ಮಕ ಗುಣಮಟ್ಟಗಳನ್ನು ಹೊಂದಿರುವ ಕಾಲೇಜು, ಶಾಶ್ವತ ಸಂಯೋಜನೆಯ ಮಂಜೂರಾತಿಗೆ ಅರ್ಹವಾಗಿರತಕ್ಕದ್ದು.

(2) 58ನೇ ಪ್ರಕರಣದಲ್ಲಿನ ಉಪಬಂಧಗಳು ಯಥೋಚಿತ ವ್ಯತ್ಯಾಸಗಳೊಂದಿಗೆ ಶಾಶ್ವತ ಸಂಯೋಜನೆಯ ಮಂಜೂರಾತಿಗೆ ಅನ್ವಯಿಸತಕ್ಕದ್ದು.

(3) ವಿಶ್ವವಿದ್ಯಾಲಯಕ್ಕೆ ಶಾಶ್ವತವಾಗಿ ಸಂಯೋಜನೆಗೊಂಡ ಕಾಲೇಜು, ಆಡಳಿತಾತ್ಮಕವಾಗಿ ಮತ್ತು ವಿದ್ಯಾವಿಷಯಕವಾಗಿ ಎರಡರಲ್ಲೂ, ತನ್ನ ಕಾರ್ಯನಿರ್ವಹಣೆಯ ಬಗ್ಗೆ ಕಾಲಕಾಲಕ್ಕೆ ವಿಶ್ವವಿದ್ಯಾಲಯದ ಮೂಲಕ ಮತ್ತು ಕನಿಷ್ಠ ಪಕ್ಷ ಐದು ವರ್ಷದ ಅವಧಿಯಲ್ಲಿ ಒಮ್ಮೆಯಾದರೂ ಸರ್ಕಾರದ ಮೂಲಕ ಪುನರವಲೋಕನಕ್ಕೆ ಒಳಪಡತಕ್ಕದ್ದು.

(4) ಹಿಂದಿನ ಉಪಪ್ರಕರಣಗಳಲ್ಲಿ ಏನೇ ಒಳಗೊಂಡಿದ್ದರೂ, ಶಾಶ್ವತ ಸಂಯೋಜನೆ ಹೊಂದಿರುವ ಕಾಲೇಜು (1)ನೇ ಉಪಪ್ರಕರಣದಲ್ಲಿ ನಿರ್ದಿಷ್ಟಪಡಿಸಲಾದ ಯಾವುದೇ ಷರತ್ತುಗಳನ್ನು ಪೂರೈಸಲು ವಿಫಲವಾದರೆ, ಶಾಶ್ವತ ಸಂಯೋಜನೆಯನ್ನು ರದ್ದುಪಡಿಸತಕ್ಕದ್ದು:

ಪರಂತು, ವಿಶ್ವವಿದ್ಯಾಲಯವು ಸಂಬಂಧಪಟ್ಟ ಕಾಲೇಜಿಗೆ ತನ್ನ ಅಹವಾಲನ್ನು ಹೇಳಿಕೊಳ್ಳಲು ಅವಕಾಶ ನೀಡದ ಹೊರತು ಅಂಥ ಶಾಶ್ವತ ಸಂಯೋಜನೆಯನ್ನು ರದ್ದುಪಡಿಸತಕ್ಕದ್ದಲ್ಲ:

ಮತ್ತು ಪರಂತು, ಶಾಶ್ವತ ಸಂಯೋಜನೆಯು ರದ್ದಾದ ತರುವಾಯ ಸಂಬಂಧಪಟ್ಟ ಕಾಲೇಜು, ಸಂಯೋಜನೆಯ ತಾತ್ಕಾಲಿಕ ಮುಂದುವರಿಕೆಯನ್ನು ವಾರ್ಷಿಕ ಆಧಾರದ ಮೇರೆಗೆ ಕೋರತಕ್ಕದ್ದು."

**12. 62ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 62ನೇ ಪ್ರಕರಣದ (2)ನೇ ಉಪಪ್ರಕರಣದಲ್ಲಿ ",ಮೌಲ್ಯಮಾಪನ ಪರೀಕ್ಷೆ ಮತ್ತು ಉಪಪರೀಕ್ಷೆಗಳನ್ನು ವ್ಯವಸ್ಥೆಗೊಳಿಸಲು" ಎಂಬ ಪದಗಳನ್ನು ಅಲ್ಪವಿರಾಮಚಿಹ್ನೆಯೊಂದಿಗೆ ಬಿಟ್ಟುಬಿಡತಕ್ಕದ್ದು.

**13. 63ನೇ ಪ್ರಕರಣದ ತಿದ್ದುಪಡಿ.–** ಮೂಲ ಅಧಿನಿಯಮದ 63ನೇ ಪ್ರಕರಣದ (6)ನೇ ಉಪಪ್ರಕರಣದ ತರುವಾಯ ಈ ಮುಂದಿನದನ್ನು ಸೇರಿಸತಕ್ಕದ್ದು, ಎಂದರೆ:–

"(7) ಸಂಯೋಜನೆ ಹೊಂದಿರುವ ಯಾವುದೇ ಕಾಲೇಜು (1)ರಿಂದ (6)ನೇ ಉಪಪ್ರಕರಣಗಳ ಅಡಿಯಲ್ಲಿ ನಿರ್ದಿಷ್ಟಪಡಿಸಿರುವ ಪ್ರಕ್ರಿಯೆಗಳನ್ನು ಅನುಸರಿಸದೆ ಯಾವುದೇ ಕೋರ್ಸನ್ನು ಅಥವಾ ಕಾಲೇಜನ್ನು ಸ್ವಇಚ್ಛೆಯಿಂದ ಮುಚ್ಚಿದಲ್ಲಿ, ವಿಶ್ವವಿದ್ಯಾಲಯವು ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಬಹುದು ಅಥವಾ ರೂ.25,000/–ಕ್ಕೆ ಕಡಿಮೆಯಿಲ್ಲದಂತೆ ಆದರೆ ರೂ.1,00,000/–ಗಳಿಗೆ ಮೀರದಂತೆ ಜುಲ್ಮಾನೆಯನ್ನು ವಿಧಿಸಬಹುದು."

**14. ಪದಾವಳಿಗಳ ಪ್ರತಿಯೋಜನೆ.–** ಮೂಲ ಅಧಿನಿಯಮದಲ್ಲಿ "ಪ್ರವಾಚಕರು", "ಉಪನ್ಯಾಸಕರು", "ಪ್ರವಾಚಕ", "ಉಪನ್ಯಾಸಕ", ಎಂಬ ಪದಗಳು ಬರುವ ಕಡೆಗಳಲೆಲ್ಲ "ಸಹವರ್ತಿ ಪ್ರಾಧ್ಯಾಪಕರು", "ಸಹಾಯಕ ಪ್ರಾಧ್ಯಾಪಕರು", "ಸಹವರ್ತಿ ಪ್ರಾಧ್ಯಾಪಕ", "ಸಹಾಯಕ ಪ್ರಾಧ್ಯಾಪಕ" ಎಂಬ ಪದಗಳನ್ನು ಪ್ರತ್ಯಯಗಳೊಡನೆ ಅನುಕ್ರಮವಾಗಿ ಪ್ರತಿಯೋಜಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ದ್ವಾರಕನಾಥ್ ಬಾಬು**
ಸರ್ಕಾರದ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳ ಇಲಾಖೆ.

ಸರ್ಕಾರಿ ಮುದ್ರಣಾಲಯ, ವಿಕಾಸ ಸೌಧ ಘಟಕ, ಬೆಂಗಳೂರು. (ಪಿ7) ಪ್ರತಿಗಳು 400

